ಅರಣ್ಯಗಳು ಪೂರೈಸುವ ಕಚ್ಚಾ ಪದಾರ್ಥಗಳನ್ನು ಆಧರಿಸಿರುವ ಕೈಗಾರಿಕೆಗಳ
ಬೆಳವಣಿಗೆಯಿಂದ ಅರಣ್ಯಗಳ ನಾಶ ಇಮ್ಮಡಿಗೊಂಡಿದೆ. ಅರಣ್ಯ ಇಲಾಖೆಗಳು ಮತ್ತು
ಅರಣ್ಯ ಕಾರ್ಪೊರೇಶನ್‌ಗಳು ಅರಣ್ಯಗಳನ್ನು ಬೆಳೆಸುವುದರ ಬದಲು ವಾಣಿಜ್ಯ ಲಾಭ
ಗಳಿಗಾಗಿ ವೃಕ್ಷ ಸಂಪತ್ತನ್ನು ನಾಶಮಾಡುತ್ತಿವೆ. ಅರಣ್ಯಗಳಲ್ಲಿರುವ ಅಪಾರ ವೃಕ್ಷ
ಗಳನ್ನು ಕಡಿದು ಅಪಾರ ಲಾಭ ಗಳಿಸುತ್ತಿವೆ. ವೃಕ್ಷಗಳನ್ನು ಬೆಳೆಸುವ ಗೋಜಿಗೆ
ಹೋಗಿಲ್ಲ.

ಭಾರತದಲ್ಲಿ ವರ್ಷಕ್ಕೆ 211 ದಶಲಕ್ಷ ಘನ ಮೀಟರ್‌ನಷ್ಟು ಮರ ಬಳಸಲ್ಪಡು
ತ್ತಿದೆ. ಇದರಲ್ಲಿ 184 ದಶಲಕ್ಷ ಘನ ಮೀಟರ್‌ನಷ್ಟು ಮರ ಉರವಲಾಗಿ ಬಳಸ
ಲಾಗುತ್ತಿದೆ. ಕೈಗಾರಿಕೆಗಳಲ್ಲಿ ಮರಗಳ ಬೇಡಿಕೆ ಅಪಾರವಾಗಿ ಏರುತ್ತಿದೆ. ಇದಕ್ಕೆ
ಸಮನಾಗಿ ನಮ್ಮ ಕಾಡುಗಳಲ್ಲಿ ವೃಕ್ಷಗಳ ಬೆಳವಣಿಗೆ-ಉತ್ಪಾದನೆ ನಡೆಯುತ್ತಿಲ್ಲ.
ನಮ್ಮ ಕಾಡುಗಳಲ್ಲಿ ವಾರ್ಷಿಕ ಮರದ ಉತ್ಪಾದನೆ ಕೇವಲ 50 ದಶಲಕ್ಷ ಘನ
ಮೀಟರ್. ಇಂದಿನ ಪ್ರಮಾಣದಲ್ಲಿ ಮರಗಳ ಉರುಳಿಸುವಿಕೆ ಮುಂದುವರಿದರೆ ಇನ್ನು
20-30 ವರ್ಷಗಳಲ್ಲಿ ನಮ್ಮ ಅರಣ್ಯ ಸಂಪತ್ತು ಸಂಪೂರ್ಣ ಖಾಲಿಯಾಗುವುದರಲ್ಲಿ
ಸಂದೇಹವಿಲ್ಲ.

ಭಾರತದ ವೃಕ್ಷ ರಕ್ಷಣೆ ಚಳುವಳಿಯ ನಾಯಕ ಶ್ರೀ ಸುಂದರಲಾಲ ಬಹುಗುಣರ
ಪ್ರಕಾರ ಅರಣ್ಯಗಳಲ್ಲಿ ನಾವು ವೃಕ್ಷಗಳನ್ನು ಬೆಳೆಸುತ್ತಿರುವ ಕ್ರಮವೇ ಮೂಲಭೂತ
ವಾಗಿ ದೋಷಪೂರ್ಣವಾಗಿದೆ. ಇಂದು ನಾವು ಅರಣ್ಯಗಳಲ್ಲಿ ಕೃತಕ ಮತ್ತು
ಯಾಂತ್ರಿಕ ಕ್ರಮದಲ್ಲಿ ಮರ ಬೆಳೆಸುತ್ತಿದ್ದೇವೆ, ಇದು ತಪ್ಪು. ಕೈಗಾರಿಕೆಗಳಿಗೆ ಬೇಕಾದ
ಕಚ್ಚಾ ಪದಾರ್ಥಗಳನ್ನು ಪೂರೈಸುವ ಮರಗಳನ್ನು ಹೆಚ್ಚಾಗಿ ಬೆಳೆಸುತ್ತಿದ್ದೇವೆ. ಬಹು
ಗುಣರ ಪ್ರಕಾರ ವಾಣಿಜ್ಯ ಆಧಾರಿತ ಅರಣ್ಯ ಚಟುವಟಿಕೆಗಳು ತಕ್ಷಣ ನಿಲ್ಲಬೇಕು.
ಗ್ರಾಮೀಣ ಜನತೆಗೆ ಮತ್ತು ಮುಖ್ಯವಾಗಿ ಕಾಡಿನಲ್ಲಿ ವಾಸಿಸುವ ಜನರಿಗೆ ಅವಶ್ಯಕ
ವಾದ ಆಹಾರ, ಮೇವು, ಸೌದೆ, ಎಣ್ಣೆಕಾಳು, ಹೂ-ಫಲ ಕೊಡುವಂತಹ ಮರ
ಗಳನ್ನು ಹೆಚ್ಚಾಗಿ ಬೆಳೆಸುವುದರಿಂದ ನಮ್ಮ ಅರಣ್ಯಗಳನ್ನು ರಕ್ಷಿಸಬಹುದು. ಸರ್ಕಾರ
ಅರಣ್ಯ ಇಲಾಖೆಗಳು ತಮ್ಮ ನೀತಿಯನ್ನು ಈ ದಿಕ್ಕಿನಲ್ಲಿ ರೂಪಿಸಿಕೊಳ್ಳಬೇಕಾಗಿದೆ
ಮರಗಳನ್ನು ಬೆಳೆಸಲು ಉತ್ತೇಜನ ನೀಡಬೇಕು. ಅರಣ್ಯಗಳಲ್ಲದೆ ರಸ್ತೆಗಳ ಮತ್ತು
ನೀರಾವರಿ ಕಾಲುವೆಗಳ ಎರಡು ಬದಿಯಲ್ಲಿ ಮರಗಳನ್ನು ನೆಡುವ ಕಾರ್ಯ ನಡೆಯ
ಬೇಕು. ನಮ್ಮ ದೇಶದಲ್ಲಿ 1·37 ದಶಲಕ್ಷ ಕಿಲೋಮೀಟರ್ ರಸ್ತೆಗಳಿವೆ. ಇದರ
ಒಂದು ದಶಲಕ್ಷ ಕಿಲೋ ಮೀಟರ್ ರಸ್ತೆಗಳು ಮರ ಬೆಳೆಸಲು ಅರ್ಹವಾಗಿವೆ. ರಸ್ತೆಯ
ಒಂದೇ ಬದಿಯಲ್ಲಿ ಕಿ. ಮೀ.ಗೆ 5 ರಂತೆ ಮರಗಳನ್ನು ಬೆಳೆಸಿದರೂ, ಅದು 1 ದಶಲ
ಹೆಕ್ಟೇರ್ ಅರಣ್ಯಕ್ಕೆ ಸಮನಾಗುತ್ತದೆ. ವಿವಿಧೋದ್ದೇಶ ನೀರಾವರಿ ಯೋಜನೆಗ

ಬೃಹತ್ ಕಾಲುವೆಗಳ ಉದ್ದ 15 679 ಕಿ.ಮೀ. ಇವುಗಳ ಎರಡೂ ಬದಿಯಲ್ಲಿ ಹಲವಾರು ಸಾಲು ಮರಗಳನ್ನು ಬೆಳೆಸಬಹುದು.

ವೃಕ್ಷವೊಂದರಿಂದಾಗುವ ಆರ್ಥಿಕ ಲಾಭವನ್ನು ಕೆಳಗಿನ ಪಟ್ಟಿಯಿಂದ ತಿಳಿಯಬಹುದು. 50 ವರ್ಷ ವಯಸ್ಸಿನ ವೃಕ್ಷವೊಂದರಿಂದಾಗುವ ಆರ್ಥಿಕ ಲಾಭ ರೂ. 15.7 ಲಕ್ಷ ಎಂದು ವಿಜ್ಞಾನಿಗಳು ಅಂದಾಜು ಮಾಡಿದ್ದಾರೆ ಅದರ ವಿವರ ಈ ರೀತಿ ಇದೆ.

| | | | | |
|---|---|---|---|---|
| 1) | ಆಮ್ಲ ಜನಕದ ಉತ್ಪಾದನೆ | — | ರೂ. | 250,000 |
| 2) | ವಾಯು ಮಲಿನತೆಯ ರಕ್ಷಣೆ | — | ರೂ. | 500,000 |
| 3) | ಮಣ್ಣಿನ ಸವಕಳಿ ಮತ್ತು ಫಲವತ್ತತೆಯ ರಕ್ಷಣೆ | — | ರೂ. | 250,000 |
| 4) | ಹವಾಮಾನ ಮತ್ತು ತೇವಾಂಶದ ರಕ್ಷಣೆ | — | ರೂ. | 300,000 |
| 5) | ಪ್ರಾಣಿ-ಪಕ್ಷಿಗಳ ರಕ್ಷಣೆ | — | ರೂ. | 250,000 |
| 6) | ಪೌಷ್ಟಿಕಾಂಶದ ರಕ್ಷಣೆ | — | ರೂ. | 20,000 |
| | 50 ವರ್ಷ ವಯಸ್ಸಿನ ವೃಕ್ಷವೊಂದರಿಂದಾಗುವ ಒಟ್ಟು ಲಾಭ | | ರೂ. | 1,570000 |

(ಮೇಲಿನ ಅಂದಾಜಿನಲ್ಲಿ ಮರವೊಂದು ಕೊಡುವ ದಿಮ್ಮಿ, ಹೂ-ಫಲ ಇವುಗಳ ಮೌಲ್ಯವನ್ನು ಸೇರಿಸಿಲ್ಲ)

ಇಷ್ಟೊಂದು ಲಾಭಕರವಾದ ಮತ್ತು ಮನುಷ್ಯನ ಸಂತೋಷವನ್ನು ಹೆಚ್ಚಿಸುವ ಅರಣ್ಯ ಸಂಪತ್ತು ಇಂದು ನಾಶವಾಗುತ್ತಿದೆ. ಸರ್ಕಾರ ಮತ್ತು ಜನತೆ ಈ ವಿನಾಶವನ್ನು ತಡೆಗಟ್ಟಬೇಕು. ಮರಗಳನ್ನು ನೆಡುವ ಕಾರ್ಯ ಬೃಹತ್ ಚಳುವಳಿಯ ರೂಪದಲ್ಲಿ ನಡೆಯಬೇಕು. 'ಮರಗಳನ್ನು ಬೆಳಸಿರಿ–ಮನುಕುಲ ಉಳಿಸಿರಿ'— ಎಂಬುದು ನಮ್ಮ ಮಂತ್ರವಾಗಬೇಕು.

## ಬರಗಾಲದ ಲಕ್ಷಣ

ಮುಂಜಾನೆ ಗಾಳಿ, ಗೊಡ್ಡಾದ ಮೋಡ
ಮಧ್ಯಾಹ್ನ ಉರಿಯಂಥ ಬಿಸಿಲು
ಸಂಜೆ ಬಹು ಶುಭ್ರಮುಗಿಲು
ತಪ್ಪದೆ ಬರಗಾಲ ಇದರ ಪಾಳಿ.

# "ಹಿಂದೂ"

ಮೂಲ (ಮರಾಠಿ): ಶ್ರೀ ಸದಾನಂದ ಕಾಳದ

ಅನುವಾದ: ಶ್ರೀ ಬಿ. ಸು. ಶೇಷಾದ್ರಿ

[ಹಿಂದು-ಹಿಂದುಸ್ಥಾನ-ಹಿಂದುರಾಷ್ಟ್ರ ಈ ಪದಗಳ ಅರ್ಥವನ್ನು ತಿಳಿದುಕೊಳ್ಳುವುದ ಹೇಯವಾದದ್ದು ಎಂಬಂತಹ ಹಾಸ್ಯಾಸ್ಪದ ವಿಚಾರಸರಣಿಯನ್ನು ಅನೇಕರು ಹೊಂದಿದ್ದಾರ ಈ ಪರಿಸ್ಥಿತಿಯನ್ನು ಬದಲಿಸಿ, ಸ್ವಾಭಿಮಾನ ಪೂರ್ಣವಾದ, ಸತ್ಯನಿಷ್ಠುರವಾದ ವಿಚಾರವನ ಮಾಡಬೇಕಾದದ್ದು ಇಂದಿನ ಅವಶ್ಯಕತೆಯಾಗಿದೆ. ಇದನ್ನು ಸಿದ್ಧಪಡಿಸಿ ತೋರಿಸು ಲೇಖನಮಾಲೆ ಇಲ್ಲಿದೆ.)

ಹಿಂದೂ ಎನ್ನುವ ಹೆಸರನ್ನು ಯಾರು ಯಾರಿಗೆ ಕೊಟ್ಟರು? ಇದಕ್ಕೇನಾ ದರೂ ವಿಶೇಷವಾದ ಅರ್ಥವಿದೆಯೇ? ಈ ಹೆಸರು ಯಾವ ಕಾಲದಲ್ಲಿ, ಯಾವ ಕಾರಣಕ್ಕಾಗಿ ಪ್ರಚಾರದಲ್ಲಿ ಬಂದಿತು? ಈಗ ಇದೇ ಹೆಸರಿನ-ಶಬ್ದದ ಅವಶ್ಯಕತ ಇದೆಯೇ? ಈ ಎಲ್ಲ ಪ್ರಶ್ನೆಗಳಿಗೆ ಬೇರೆ ಬೇರೆ ಜನರು ಬೇರೆ ಬೇರೆ ಸಮಯದಲ್ಲಿ ಬೇರೆ ಬೇರೆ ರೀತಿಯ ಉತ್ತರಗಳನ್ನು ಕೊಟ್ಟಿದ್ದಾರೆ.

ಕ್ರಿಶ್ಚಿಯನ್ ಅಥವಾ ಇಸ್ಲಾಮ್ ಧರ್ಮಗಳೂ ಹುಟ್ಟುವುದಕ್ಕೆ ಬಹ ಹಿಂದಿನ ಕಾಲದಿಂದಲೇ, ಅರಬ್ಬೀಸ್ಥಾನ, ಇರಾನ್, ಈಜಿಪ್ತ್, ಭಾರತ ಮುಂತಾದ ಕಡೆಗಳಲ್ಲಿ ಹಿಂದೂಧರ್ಮ ವ್ಯಾಪಕವಾಗಿ ಪ್ರಚಾರ ಮತ್ತು ವ್ಯವಹಾರದಲ್ಲಿದ್ದಿತು ಅಷ್ಟರಲ್ಲಿ ಹಿಂದು ಮತ್ತು ಹಿಂದೂಸ್ಥಾನ ಎನ್ನುವ ಹೆಸರುಗಳಿಗೆ ಬಹಳಷ್ಟು ಗೌರವ ಇದ್ದಿತು. ಪ್ರವಾದಿ ಮುಹಮ್ಮದ್ ಪೈಗಂಬರರು ಹುಟ್ಟುವುದಕ್ಕೆ ಸುಮಾರ 2,300 ವರ್ಷಗಳ ಮೊದಲೇ ಅರಬ್ಬಿಸ್ಥಾನದಲ್ಲಿ 'ಲಬೀ ಬಿನ್ ಅಬತಬ್ ಬಿನ ತುರ್ಫಾ' ಎನ್ನುವ ಕವಿ ಇದ್ದನು. ಅನೇಕ ಕಾವ್ಯಗಳನ್ನು ಬರೆದಿದ್ದ ಆತ ತನ ಕಾವ್ಯವೊಂದರಲ್ಲಿ ಹೀಗೆ ಹೇಳಿದ್ದಾನೆ.

"ಅಯಾ ಮುಬಾರಕೇಲ್ ಅರಜ್ ಯಾ ಕೌಯೇ ನೋಹಾ ಮಿಲನ್ ಹಿಂದೇ

ವ ಅರಾದಕಲ್ಲಾಹ ಮರಿಯೇನ ಜ್ಜೇಲ್ ಜಿಕರತುಸ್

ವಹಲ್ ತಜಲ್ಲೀಯತುನ್ ಏನಾನ್ಯೇ ಸಹಬೀ ಅಬ್ ಅತುನ್ ಜಿಕರಾ |
ವಹಾಜೀಹೀ ಯೋನಜ್ಜೇಲುದ್ರಸೂಲ್ ಮಿಲನ್ ಹಿಂದತೂನ್ ||೨||

ಅರ್ಥ-೧: ಹೇ ಪುಣ್ಯಭೂಮಿ ಹಿಂದ್, ಸ್ವತಃ ಪರಮೇಶ್ವರನೇ ನಿನ್ನನ್ನು ತನ್ನ ಜ್ಞಾನಭೂಮಿಯನ್ನಾಗಿ ಆರಿಸಿಕೊಂಡಿರುವುದರಿಂದ ನೀನೇ ನಿಜವಾಗಿಯೂ ಧನ್ಯೆ !

ಅರ್ಥ-೨: ಹಿಂದುಸ್ಥಾನದ ಋಷಿಮುನಿಗಳ ಮುಖಾಂತರ ಪರಮೇಶ್ವರನೇ ಪ್ರಚುರಪಡಿಸಿದ, ಜ್ಞಾನ ಪ್ರಕಾಶಕ್ಕೆ ನಾಲ್ಕು ಸ್ತಂಭಗಳಂತಿರುವ, ನಾಲ್ಕು ವೇದಗಳೂ ಸಂಪೂರ್ಣ ಜಗತ್ತನ್ನು ಪ್ರಕಾಶಮಯವನ್ನಾಗಿ ಮಾಡಿವೆ.

—ಸೇ ಅಕೂಲ್ ಅಕೂಲ್-ಪುಟ 157

ಮಹಮ್ಮದ್ ಪೈಗಂಬರರಿಗಿಂತ ಬಹಳ ಹಿಂದೆಯೇ ಅರಬ್ಬೀಸ್ಥಾನದಲ್ಲಿ ಶಿವ ಪೂಜೆ ಪ್ರಚಲಿತವಾಗಿದ್ದಿತು. ಕ್ರಿಸ್ತಪೂರ್ವ ಐದು ಮತ್ತು ಆರನೇ ಶತಮಾನಗಳಲ್ಲಿ ಬರೆದ ಕವಿತೆಗಳಲ್ಲಿ ನಮ್ಮ ದೇಶವು 'ಹಿಂದ್' ಎಂದೇ ಕರೆಯಲ್ಪಟ್ಟಿರುವುದಕ್ಕೆ ಆಧಾರಗಳಿವೆ. ಮಹಮ್ಮದ್ ಪೈಗಂಬರರ ಸ್ವಂತ ಚಿಕ್ಕಪ್ಪ "ಉಮರ್ ಬಿನ್ ಹಶ್ಯಾಮ್" ಎನ್ನುವರು ಸುಪ್ರಸಿದ್ಧ ಕವಿಗಳಾಗಿದ್ದರು. ಅವರು ತಮ್ಮ ಕವಿತೆಗಳಲ್ಲಿ ಹಿಂದ್ ಹಿಂದೂ, ಮತ್ತು ಮಹಾದೇವ ಎನ್ನುವ ಹೆಸರುಗಳನ್ನು ಬಹಳ ಗೌರವ ಮತ್ತು ಆದರದ ಭಾವನೆಗಳಿಂದ ಉಪಯೋಗಿಸಿದ್ದಾರೆ.

ಉಮರ್ ಬಿನ್ ಹಮ್‌ಶ್ಯ ಅವರು "ಅಬುಲ್ ಹಕೀಮ್" ಎಂದರೆ "ಜ್ಞಾನದ ಪಿತ" ಎಂದೇ ಪ್ರಖ್ಯಾತಿ ಹೊಂದಿದ್ದರು. ಆದರೆ ಅವರು ಇಸ್ಲಾಮ್ ಧರ್ಮವನ್ನು ಸ್ವೀಕರಿಸಲಿಲ್ಲವೆಂಬ ಕಾರಣದಿಂದ ಮುಸಲ್ಮಾನರು ದ್ವೇಷ ಮತ್ತು ಪಕ್ಷಪಾತಗಳಿಂದ 'ಅಬುಲ್ ಜಹಲ್' ಎಂದರೆ 'ಅಜ್ಞಾನದ ಪಿತ' ಎಂದು ಕರೆಯಲು ತೊಡಗಿದರು. ಮಹಾದೇವನ ಭಕ್ತರಾಗಿದ್ದ ಮಹಮ್ಮದ್ ಪೈಗಂಬರರ ಈ ಚಿಕ್ಕಪ್ಪ ಮುಂದೆ, ಮುಸಲ್ಮಾನರ ಜೊತೆ ನಡೆದ ಧರ್ಮಯುದ್ಧದಲ್ಲಿ ಹೋರಾಡುತ್ತಾ ಸಾವನ್ನಪ್ಪಿದರು. ಇಸ್ತಾನ್‌ಬುಲ್‌ನಲ್ಲಿ, ಸರ್ಕಾರೀ ಗ್ರಂಥಾಲಯದಲ್ಲಿರುವ "ಸೈರುಲ್ ಅಕೂಲ್" ಎನ್ನುವ ಗ್ರಂಥದಲ್ಲಿ ಈ 'ಜ್ಞಾನಪಿತ'ರ ಕೆಳಕಂಡ ಕವಿತೆ ಉದ್ಧೃತವಾಗಿದೆ.

ಕಫಾವಿಕ್ ಜಿಕರ್ಮಿನ್ ಅಲೂಮಿನ್ ತಬ್ ಅಸೇರೂ |
ಕಲೂಬನ್ ಅಮತತೂಲ್ ಹವಾ ಏ ತಜಕ್ಕರೂ ||೧||

ಏಮತ್ ಜಕೇರೋಹಾ ಊದನ್ ಏಲಲವರವ ದಿಲವರಾ |
ವಲಕಯಾನೇ ಜಾತಾ ಅಲ್ಲಾ ಹೇಯಾಮು ತಬ್ ಅಸೇರೂ ||೨||

ವ ಅಹಲೋಲಹಾ ಅಜಹು ಅರವೀಮನ್ ಮಹಾದೇವ ಓ।
ಮನಾಜಿಲ್ ಇಲಮುದ್ದೀನೇ ಮಿನಹುಮ್ ಮಸಯುತ್ತರೂ ॥೩॥

ವ ಸಹಬೀ ಕೇಯಾಮು ಫೀ ಮಕಾಮಿಲ್ ಹಿಂದೇ ಯೌಮನ।
ವ ಯಕೂಲನ್ ಲಾತಹಜನ್ ಫ ಇನ್ನಕ್ ತವಜ್ಜರೂ ॥೪॥

ಮ ಅಸ್ಸಯರೇ ಅಖಲಾಕುನ್ ಹಸನನ್ ಕುಲ್ಲಹುಮ್ ।
ನಜೂಮುನ್ ಅಜಾಅತ್ ಸುಮ್ಮಗಾಟುಲ್ ಹಿಂದೂ ।೫॥

ಅರ್ಥ-೧ : "ಯಾವ ಮನುಷ್ಯನು ಜನ್ಮವಿಡೀ ಪಾಪ ಮತ್ತು ಅಧರ್ಮಗಳಲ್ಲಿ ಮುಳುಗಿ ಹೋಗಿದ್ದಾನೋ ಮತ್ತು ಕಾಮಕ್ರೋಧಾದಿಗಳಲ್ಲಿ ಆಯುಷ್ಯವನ್ನು ವ್ಯರ್ಥ ಮಾಡಿದ್ದಾನೋ"

೬ : "ಅಂತಹವನು ಕೂಡ ಅಂತ್ಯದಲ್ಲಿ ಪಶ್ಚಾತ್ತಾಪ ಪಟ್ಟು, ಒಳ್ಳೆಯ ಮಾರ್ಗದಲ್ಲಿರಬೇಕೆಂದು ಆಸೆಪಟ್ಟರೆ ಅಂತಹವನಿಗೆ ಕಲ್ಯಾಣವಾಗುತ್ತದೆಯೇ ಎಂದು ಕೇಳಿದರೆ ಆಗುತ್ತದೆ ಎಂದೇ ಹೇಳಬೇಕು."

೩ : "ಅಂತಹ ಮನುಷ್ಯನು ಕೂಡ ಒಮ್ಮೆಯಾದರೂ ಅಂತಃಕರಣ ಪೂರ್ವಕವಾಗಿ ಆ ಮಹಾದೇವನ ಪೂಜೆಯನ್ನು ಮಾಡಿದರೆ, ಆಗ ಅವನು ಧರ್ಮಮಾರ್ಗದಲ್ಲಿ ಉತ್ತಮವಾದ ಪದವಿಯನ್ನು ಹೊಂದುತ್ತಾನೆ."

೪ : "ಹೇ ಪ್ರಭೋ ನನ್ನ ಸಂಪೂರ್ಣ ಆಯುಷ್ಯವನ್ನು ತೆಗೆದುಕೊಂಡು, ಅದರ ಬದಲು ದರ್ಶನಮಾತ್ರದಿಂದಲೇ ಜೀವನ್ಮುಕ್ತನಾಗುವಂತಹ ದೇಶವಾದ ಹಿಂದೂ ದೇಶದಲ್ಲಿ ಒಂದೇ ಒಂದು ದಿನವಾದರೂ ಇರುವ ಅವಕಾಶವನ್ನು ನನಗೆ ಕೊಡು."

೫ : "ಹಿಂದೂಸ್ಥಾನದ ಯಾತ್ರೆಯಿಂದ ಸರ್ವ ಪವಿತ್ರ ಕಾರ್ಯಗಳ ಸಫಲತೆ ಸಿಕ್ಕುತ್ತದೆ ಮತ್ತು ಆದರ್ಶ ಹಿಂದೂ ಗುರುಗಳ ಸತ್ಸಂಗವೂ ದೊರಕುತ್ತದೆ." (ಈ ಪದ್ಯಗಳನ್ನು ಅರ್ಥಸಹಿತವಾಗಿ ದೆಹಲಿಯ ಶ್ರೀ ಲಕ್ಷ್ಮೀನಾರಾಯಣ ಮಂದಿರದ ಗೀತಾಭವನದಲ್ಲಿ ಕಲ್ಲಿನಲ್ಲಿ ಕೆತ್ತಿಸಿಟ್ಟಿದ್ದಾರೆ).

ಅರಬ್ಬೀ ದೇಶದಲ್ಲಿ ಹೆಣ್ಣುಮಕ್ಕಳಿಗೆ 'ಹಿಂದ್' ಎನ್ನುವ ಹೆಸರನ್ನು ಇಡುವುದು ಬಹಳ ಸಾಮಾನ್ಯವಾಗಿದ್ದಿತು. ಮಹಮದ್ ಪೈಗಂಬರರಿಗೆ ಅನೇಕ ಜನ ಪತ್ನಿಯರಿದ್ದರು. ಅವರಲ್ಲಿ ಒಬ್ಬರ ಹೆಸರು 'ಹಿಂದ್' ಎಂದಿದ್ದಿತು. ಪ್ರೇಮ ಕಥೆ

ಗಳಲ್ಲಿ ಪ್ರಸಿದ್ಧವಾದ ಲೈಲಾಳ ನಿಜವಾದ ಹೆಸರು 'ಹಿಂದ್' ಎಂದೇ ಇದ್ದಿತು. ಅಮೀರ್‌ಮವಾ ಇಯಾ ಅವರ ತಾಯಿ ರಯೀಸುಲ್ ಅರಬ್ ಅತಬ್ ಅವರ ಮಗಳ ಹೆಸರೂ 'ಹಿಂದ್' ಎಂದೇ ಇದ್ದಿತು

ಕಾಬಾದ ವಿಶಾಲವಾದ ಮಹದೇವ ಮಂದಿರದಲ್ಲಿ ಮಕ್ಕೇಶ್ವರ ಮಂದಿರದಲ್ಲಿ ಪ್ರತಿ ಐದು ವರ್ಷಕ್ಕೊಂದು ಸಲ ಅರಬ್ಬೀ ಕವಿಗಳ ಸಮ್ಮೇಳನ ನಡೆಯುತ್ತಿತ್ತು. ಆ ಸಮ್ಮೇಳನಗಳಲ್ಲಿ ಸರ್ವಶ್ರೇಷ್ಠವೆಂದು ನಿರ್ಣಯಿಸಲ್ಪಟ್ಟ ಕವಿತೆಗಳನ್ನು ಚಿನ್ನದ ಪಟ್ಟಿಗಳಲ್ಲಿ ಕೊರೆದು ಆ ಮಂದಿರಗಳಲ್ಲಿ ಇಟ್ಟಿರುತ್ತಿದ್ದರು. ಇಂತಹ ಪಟ್ಟಿಗಳ ರಾಶಿಯೇ ಆ ಮಂದಿರದಲ್ಲಿತ್ತು.

ಮೊಹಮ್ಮದ್ ಪೈಗಂಬರರು ಈ ಮಂದಿರದ ಮೇಲೆ ಹಲ್ಲೆ ನಡೆಸಿ ಅದನ್ನು ವಶಪಡಿಸಿಕೊಂಡಾಗ ಅಲ್ಲಿದ್ದ ಇಂತಹ ಗ್ರಂಥಸಂಗ್ರಹವನ್ನು ಸುಡಿಸುವುದಕ್ಕೆ ಆರಂಭಮಾಡಿದರು. ಆಗ ಅಲ್ಲದ್ದ ಕೆಲವು ಕವಿಗಳ ಪ್ರಾರ್ಥನೆಯಿಂದಾಗಿ ಅಲ್ಲಿದ್ದ ಕೆಲವು ಚಿನ್ನದ ಹಾಳೆಗಳು ನಾಶವಾಗದೆ ಉಳಿದುಕೊಂಡವು. ಸ್ವಲ್ಪ ಸಮಯದ ನಂತರ ಆಗಿನ ಖಲೀಫರಾಗಿದ್ದ ಹಸತ್-ಅಲ್-ರಷಿದ್ ಅವರು ಮಹಮ್ಮದ್ ಪೈಗಂಬರರಿಗಿಂತ ಹಿಂದಿದ್ದ ಕಾವ್ಯಗಳ ಸಂಗ್ರಹವನ್ನು ಮಾಡಿದರು. ಆ ಗ್ರಂಥದಲ್ಲಿರುವ ಕಾವ್ಯಗಳಲ್ಲಿದ್ದ ಮಹಾದೇವ, ಹಿಂದೂ ಮತ್ತು ವಿಕ್ರಮಾದಿತ್ಯರ ಹೆಸರುಗಳ ಸನ್ಮಾನ ಪೂರ್ವಕವಾದ ಉಲ್ಲೇಖ ಆಗಿರುವುದು ಕಾಣಿಸುತ್ತದೆ. ಶ್ರಾತ ಎನ್ನುವ ಹೆಸರಿನ ಒಬ್ಬ ಯಕ್ಷ (ಯಕ್ಷಿ) ತನ್ನ ದಿವ್ಯರಥದಲ್ಲಿ ಕುಳಿತು ಪೂರ್ವದಲ್ಲಿರುವ ಹಿಂದಾ (ಹಿಂದ್) ದೇಶದಿಂದ ಹೊರಟು ಪಶ್ಚಿಮದ ನಿಗ್ನೇ ಎನ್ನುವ ಪ್ರದೇಶದ ತನಕ ಸಂಚಾರ ಮಾಡುತ್ತಿದ್ದನೆಂಬ ವಿಷಯದ ಉಲ್ಲೇಖ ಫಾರಸೀ ಗ್ರಂಥದ ಒಂದು ಶ್ಲೋಕವಿದೆ. ನಿಗ್ನೇ [ನೈನೇವ್ಹವಾ] ಎನ್ನುವ ಪಟ್ಟಣವನ್ನು ಬೆಬಿಲೋನಿಯನ್ನರು ಕ್ರಿಸ್ತಪೂರ್ವ 612ನೇ ಇಸವಿಯಲ್ಲಿ ನಾಶಮಾಡಿದರು.

ಪಾರಸೀಜನರು ಪ್ರಾಚೀನ ಗ್ರಂಥವಾದ 'ಜೇಂದಿಯಾದ್' ನಲ್ಲಿ [ಅಧ್ಯಾ 1 ಶ್ಲೋಕ 19]. ಆ ಕಾಲದ ಸುಸಂಸ್ಕೃತವೆಂದು ಪ್ರಖ್ಯಾತವಾದ ದೇಶಗಳಲ್ಲಿ 'ಹಪ್ತ ಹಿಂದ್'[ಸಪ್ತಸಿಂಧುಃ] ಕೂಡ ಒಂದೆಂದು ಹೆಸರಿಸಲ್ಪಟ್ಟಿದೆ

ಬಹಳ ಪ್ರಾಚೀನ ಕಾಲದಿಂದ ಹಿಂದುಸ್ಥಾನ ಮತ್ತು ಹಿಂದು ಜನರ ಸಂಬಂಧ ಅರಬ್ಬೀಸ್ಥಾನ, ಇರಾಣ, ಈಜಿಪ್ತ್ ಮುಂತಾದ ದೇಶಗಳ ಜನರಿಗೆ ಇತ್ತೆಂದೂ, ಇಂತಹ ದೂರ ದೇಶಗಳಲ್ಲಿ ಕೂಡ ಹಿಂದುಸ್ಥಾನ ಮತ್ತು ಹಿಂದು ಜನರ ಬಗ್ಗೆ ಆದರವಾದರಗಳ ಭಾವನೆ ಇತ್ತೆಂಬುದು' ಈ ಎಲ್ಲ ಉದಾಹರಣೆಗಳಿಂದ ಕಂಡುಬರುತ್ತದೆ.

ಇರಾನಿನ ಪ್ರಸಿದ್ಧ ಬಾದಶಹನಾದ ದಾರಾ ಕ್ರಿಸ್ತಪೂರ್ವ 522ರಿಂದ 486ರ ತನಕ ರಾಜ್ಯಭಾರ ಮಾಡುತ್ತಿದ್ದರು. ಅವರ ರಾಜ್ಯ ಸಿಂಧೂನದಿ ತನಕ ಹಬ್ಬಿದ್ದಿತು.

(35 ನೇ ಪುಟ ನೋಡಿ)

# ಬಸವಣ್ಣನವರು

—ಚೆನ್ನಪ್ಪ ಎರೇಸೀಮೆ

(ತಾ|| ೫-೮-೮೩ ರಂದು ಶ್ರೀ ನಿ.ಪ್ರ.ಸ್ವ. ಡಾ|| ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಬೆಂಗಳೂರು ಜಯನಗರದ ಬಸವ ಸೇವಾ ಸಮಿತಿಯವರು ಬೆಳಗೋಡು ಕಲ್ಯಾಣ ಮಂಟಪದಲ್ಲಿ ಏರ್ಪಡಿಸಿದ್ದ ಬಸವಜಯಂತ್ಯುತ್ಸವದಲ್ಲಿ ಮಾಡಿದ ಮನನೀಯ ಭಾಷಣದ ಸಾರಾಂಶ.

ಜಗತ್ತಿನ ಇತಿಹಾಸದಲ್ಲಿ ಅನೇಕ ಮಹಾ ಪುರುಷರು ಕ್ರಾಂತಿಯನ್ನು ಮಾಡಿ ಜನಜೀವನಕ್ಕೆ ಅನೇಕ ಬಗೆಯ ಕೊಡುಗೆಗಳನ್ನು ಇತ್ತಿದ್ದಾರೆ. ಆದರೆ ಇಡೀ ಜಗತ್ತಿನಲ್ಲಿ ಸಮಗ್ರ ಕ್ರಾಂತಿಯ ಮೂಲ ಪುರುಷರೆಂದರೆ ನಿಜವಾಗಿಯೂ ಬಸವಣ್ಣನವರು. ಅವರು ಜೀವನದ ಯಾವ ಕ್ಷೇತ್ರವನ್ನೂ ಉದಾಸೀನ ಮಾಡಲಿಲ್ಲ. ತುಂಬು ಜೀವನ ವೆಂದರೇನೆಂಬುದನ್ನು ಬಸವಣ್ಣನವರ ವಿಚಾರಧಾರೆಯಿಂದಲೇ ಕಾಣಬೇಕು. ಅವ ರನ್ನು ಯಾವ ದೃಷ್ಟಿಕೋನದಿಂದ ನೋಡಿದರೂ ಅವರೊಬ್ಬ ಧೀಮಂತ ವ್ಯಕ್ತಿಗಳಾಗಿ ನಮಗೆ ಕಾಣುತ್ತಾರೆ. ಆಧ್ಯಾತ್ಮಿಕ ಕ್ಷೇತ್ರ, ಸಾಮಾಜಿಕ ಕ್ಷೇತ್ರ, ಧಾರ್ಮಿಕ ಕ್ಷೇತ್ರ, ಆರ್ಥಿಕ ಕ್ಷೇತ್ರ ಎಲ್ಲ ಕ್ಷೇತ್ರಗಳ ಪರಿಷ್ಕಾರಕ್ಕೆ, ಸುಗಮತೆಗೆ ಅವರಂತೆ ಯೋಚನೆ ಮಾಡಿದ ಇನ್ನೊಬ್ಬ ಕ್ರಾಂತಿ ಪುರುಷರು ನಮಗೆ ಜಗತ್ತಿನ ಚರಿತ್ರೆಯಲ್ಲೇ ಸಿಕ್ಕುವುದಿಲ್ಲ ವೆಂದರೆ ಇದು ಕೇವಲ ಅಭಿಮಾನದಿಂದ ಹೇಳುವ ಮಾತಂತೂ ಅಲ್ಲ. ಅವರು ಬಿಟ್ಟುಹೋಗಿರುವ ಜ್ಯೋತಿರ್ಗರ್ಭದಂತಿರುವ ವಚನಗಳು ನಮಗೆ ಅವರ ಸಮಗ್ರ ವಿಚಾರಧಾರೆಯನ್ನು ಅಭಿವ್ಯಕ್ತಗೊಳಿಸುತ್ತವೆ. ಎಷ್ಟೋ ಜನ ಮಹಾಪುರುಷರು ನಾನು ದೇವದೂತ, ದೇವರ ಕಡೆಯಿಂದ ಸಂದೇಶತಂದಿದ್ದೇನೆ. ಆ ಸಂದೇಶ ಕೇಳಿರಿ ಎಂದು ಹೇಳಿದ್ದಾರೆ. ಬಸವಣ್ಣ ಹಾಗೆಂದೂ ಹೇಳಿಲ್ಲ ಬಸವಣ್ಣ ತನನ್ನು ಸಾಮಾನ್ಯ ಭಕ್ತ, ನನಗಿಂತ ಚಿಕ್ಕವರು ಯಾರೂ ಇಲ್ಲ, ಎಲ್ಲರೂ ನನಗಿಂತದೊಡ್ಡವರೇ. ಈ ಭಾವನೆಯೇ ನನಗೆ ದಿವ್ಯಎಂದಿದ್ದಾರೆ, ಉಳಿದವರಂತೆ ಅವರ ಹುಟ್ಟಿನಲ್ಲಿ ಪವಾಡವಿಲ್ಲ, ಅಯೋನಿಜತ್ವವಿಲ್ಲ, ಅಥವಾ ಇನ್ನಾವ ಅವೈಜ್ಞಾನಿಕ ಕಲ್ಪನೆಯಿಲ್ಲ.

ಬಸವಣ್ಣ ನಮ್ಮ ಹಾಗೆ ಸಮಾಜ ಮಧ್ಯದಲ್ಲಿ ಹುಟ್ಟಿ ಬೆಳೆದು ಸಮಾಜ ಜೀವನ ವನ್ನು ಎಲ್ಲ ಮುಖದಲ್ಲೂ ವಿಶ್ಲೇಷಿಸಿ ಅರ್ಥಮಾಡಿಕೊಂಡು ಚಿಂತಿಸಿ ಅಂಥ ಸಮಾ ಜದ ಲೋಪದೋಷಗಳನ್ನು ಸರಿಪಡಿಸಿ ದಾರಿಗೆ ತರಲು ಹೆಣಗಿದರು. ಹಿಂದಿನ ಅನೇಕ

ಸಹಸ್ರ ವರ್ಷಗಳಿಂದ ಹರಿದು ಬಂದ ವೇದ-ಪುರಾಣ–ಶಾಸ್ತ್ರ–ಆಗಮಗಳನ್ನು ಮೀಮಾಂಸೆಗೊಳಗುಮಾಡಿ ಅನುಭವದ ಒರೆಗಲ್ಲಿಗೆ ನಿಲುಕುವ ಅಭಿಪ್ರಾಯಗಳನ್ನು ಸ್ವೀಕರಿಸಿ ಉಳಿದವುಗಳನ್ನು ನಿರ್ಭಯವಾಗಿ ಖಂಡಿಸಿದರು.

ಬಸವಣ್ಣ ಜೀವ-ಜಗತ್ತು-ಈಶ್ವರನ ಬಗೆಗೆ ಚೆನ್ನಾಗಿ ಅರ್ಥಮಾಡಿಕೊಂಡು ಜನಸಾಮಾನ್ಯಕ್ಕೆಲ್ಲ ಅನ್ವಯವಾಗಬಲ್ಲ ಹೃದಯಸ್ಪರ್ಶೀ ಮಾರ್ಗವನ್ನು ಲೋಕಕ್ಕೆ ಸಾರುವಾಗ, ಏಕ ದೇವೋಪಾಸನೆಗೆ ಸಮಗ್ರ ಹಿಂದೂ ಜನಾಂಗವನ್ನೆ ಒಳಗುಮಾಡು ವಲ್ಲಿ ನಿರ್ಭಯವಾಗಿ ನ್ಯಾಯ ನಿಷ್ಠುರಿಗಳಾಗಿ ವರ್ತಿಸಿದ್ದಾರೆ. ಮನುಷ್ಯ ಸಾಹಸ ಶೀಲನಾಗಿ, ವಿಚಾರಪರನಾಗಿ, ಕಷ್ಟಜೀವಿಯಾಗಿ, ಜೀವದಯಾಪರನಾಗಿ ಈಶ್ವರ ನನ್ನು ನಂಬಿ ಜೀವನ ಸಾಗಿಸುವಲ್ಲಿ ಸುಖವನ್ನು ಕಾಣಬೇಕೆಂಬುದೇ ಅವರ ಭೋಧೆಯ ಮುಖ್ಯ ತಿರುಳು ದೇಶದ ಆರ್ಥಿಕ ಸಂಪತ್ತು ಕೆಲವೇ ಜನರ ಸುಖದ ಸಿಂಹಪಾಲಾಗ ಬಾರದು. ಅದನ್ನು ಎಲ್ಲರೂ ಹಂಚಿಕೊಂಡು ಅನುಭವಿಸಬೇಕೆಂಬ ಆಧುನಿಕ ಅರ್ಥ ಶಾಸ್ತ್ರಜ್ಞರನ್ನು ನಾಚಿಸುವಂತಹ ಅಭಿಪ್ರಾಯವನ್ನು ಸಾರ್ವತ್ರಿಕಗೊಳಿಸುವಲ್ಲಿ ಅವರ ಧೀಮಂತಿಕೆ ಎದ್ದು ಕಾಣುವ ಅಂಶ. ಹಿಂದುಳಿದವರು-ದೀನರು-ದಲಿತರು-ಅಸ್ಪೃಶ್ಯ ರೆನಿಸಿಕೊಂಡು ಹಿಂದೂ ಧರ್ಮದ ಔದಾರ್ಯರಹಿತ ಕ್ರಮದಿಂದ ಪಾತಾಳದಲ್ಲಿರುವವರಿಗೆ ಬೆಳೆಯಲು ಅವಕಾಶಕೊಟ್ಟರೆ ಎಂಥ ಮಹಾಪುರುಷರು ಹುಟ್ಟಬಹುದೆಂಬುದನ್ನು ಆ ಸಮಾಜಗಳಿಂದ ಮೇಲೆದ್ದುಬಂದು ಕಾಣಿಸಿಕೊಂಡ ಅನೇಕ ಶರಣರ ದೃಷ್ಟಾಂತದಿಂದ ತೋರಿಸಿಕೊಟ್ಟಿದ್ದಾರೆ.

ಭಾರತದೇಶದ ಚರಿತ್ರೆಯಲ್ಲಿ ಬೆಳೆದುಬಂದ ತತ್ತ್ವಶಾಸ್ತ್ರವನ್ನು ಪರಿಶೀಲಿಸಿದರೆ ಆಧ್ಯಾತ್ಮಿಕತೆ ಲೌಕಿಕ ಜೀವನವನ್ನು ತಿರಸ್ಕರಿಸಿಲ್ಲವೆಂಬುದು ತಿಳಿದುಬರುತ್ತದೆ. ಆದರೆ ಅವು ಹುಟ್ಟಿದ ಸ್ಥಿತಿಯಲ್ಲೇ ಉಳಿಯದೇ ಕಾಲಕಾಲಕ್ಕೆ ಅನೇಕರ ಸ್ವಾರ್ಥಪರ ದೃಷ್ಟಿ ಯಿಂದ ಪ್ರಕ್ಷಿಪ್ತವನ್ನೊಳಗೊಂಡು ವರ್ಗ ಕಲ್ಪನೆ ಮಾಡಿದುದರ ಪರಿಣಾಮವಾಗಿ ಕಸಬುಗಳಿಂದ ಜನಾಂಗಗಳನ್ನು ಒಡೆದು ನೂರಾರು ಜಾತಿಗಳನ್ನು ಕಲ್ಪಿಸಿದುದರ ಪರಿ ಣಾಮವಾಗಿ ಹಿಂದೂ ಸಮಾಜವೇ ಚೂರುಚೂರಾಗಿ, ಪೌರುಷಹೀನವಾಗಿ, ತಮ್ಮ ರಾಷ್ಟ್ರವನ್ನು ತಾವು ಹತೋಟಿಯಲ್ಲಿಟ್ಟುಕೊಳ್ಳಲಾಗದೆ ಪದೇ ಪದೇ ಪರಕೀಯರ ಆಘಾತಗಳಿಂದ ಜರ್ಝರಿತಗೊಂಡು ಐಶ್ವರ್ಯವನ್ನು ನಷ್ಟಗೊಳಿಸಿಕೊಂಡುದು ಒಂದು ಸಾವಿರದ ಐದುನೂರು ವರ್ಷಗಳ ಚರಿತ್ರೆಯನ್ನು ಅವಲೋಕಿಸಿದವರಿಗೆ ತಿಳಿಯುವ ಅಂಶವೇ ಆಗಿದೆ. ಬಸವಣ್ಣ ಅಂದಿನ ಕಾಲದ ದೊಡ್ಡ ಅರ್ಥ ಶಾಸ್ತ್ರಜ್ಞ, ರಾಜಕೀಯ ಧುರೀಣ ಮತ್ತು ಸಮಾಜಶಾಸ್ತ್ರವೇತ್ತನೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಗುಪ್ತರ ಕಾಲದ ಹೂಣರು ಸಿಥಿಯನ್ನರ ದಾಳಿಗಳಿಂದ ಮೊದಲ್ಗೊಂಡು ಘಜನಿಮಹಮ್ಮದನ ೧೦೨೪ ರ ವರೆಗಿನ ದಾಳಿಗಳನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು. ಸಮಗ್ರ ರಾಷ್ಟ್ರ

ವನ್ನು ಒಂದು ಧಾರ್ಮಿಕ ವ್ಯವಸ್ಥೆಗೊಳಗುಪಡಿಸಿ, ಜೀವಜಗತ್ತು ಈಶ್ವರದ ಬಗೆಗೆ ಸರಿಯಾದ ಕಲ್ಪನೆ ಕೊಟ್ಟ ಪೌರುಷಪ್ರಧಾನ ಜನಾಂಗ ನಿರ್ಮಿಸಿ ರಾಷ್ಟ್ರರಕ್ಷಣೆಗೆ ಸಿದ್ಧಪಡಿಸಬೇಕೆಂಬ ಸಂಕಲ್ಪ ಮಾಡಿ ಕಾರ್ಯರಂಗಕ್ಕೆ ಧುಮುಕಿದುದೇ ತಡ ಭಾರತದ ಮೂಲೆ ಮೂಲೆಗಳಿಂದ ಹಿಂದೂ ಸಮಾಜದ ಅನೇಕ ವರ್ಗಗಳ ಮುಖಂಡರ ಜಂಬಲ ಸಿಕ್ಕಿದನ್ನು ಕಾಣಬಹುದು. ಹಿಂದೂ ಸಮಾಜದ ತಾರತಮ್ಯದ ಅಭಿಶಾಪ ಹತರಾದ ಅನೇಕ ಹಿಂದುಳಿದ ಸಮಾಜಗಳ ಧೀಮಂತ ವ್ಯಕ್ತಿಗಳಿಗೆ ಬಸವಣ್ಣನವರ ಸಮಾನತೆಯ ಆಧಾರದ ಮೇಲೆ ಕಟ್ಟಬಯಸಿದ ಸಮಾಜದ ರೂಪರೇಖೆಗಳು ಹರ್ಷಗೊಳಿಸಿದವು. ಇಡೀ ರಾಷ್ಟ್ರದಲ್ಲಿಯೇ ವಿದ್ಯುತ್ ಸಂಚಾರವಾದಂತಾಗಿ ನೂತನ ವರ್ಗವೊಂದು ಏರ್ಪಟ್ಟಿತು. ಬಸವಣ್ಣನನಂತರ ಇಂಥ ಒಂದು ಸಮಾಜ ನಿರ್ಮಾಣಮಾಡಬಲ್ಲ ಮಹಾ ಪುರುಷರು ಹುಟ್ಟಲಿಲ್ಲ. ಇಂದೂ ಕೂಡ ಹಿಂದೂ ಸಮಾಜವನ್ನು ಒಂದು ಸಮಾನತೆಯ ಆಧಾರದ ಮೇಲೆ ಕಟ್ಟಲಾಗುತ್ತಿಲ್ಲ. ಇದರ ಕಹಿ ಫಲವನ್ನು ಇಂದು ನಾವು ಅನುಭವಿಸುವ ದೌರ್ಭಾಗ್ಯ ಒದಗಿದೆ. ದೇಶದ ಸಮಗ್ರ ಜನಾಂಗವನ್ನು ಹತೋಟಿಯಲ್ಲಿಟ್ಟುಕೊಂಡು ಭಾರತವನ್ನು ಸಮೃದ್ಧ ರಾಷ್ಟ್ರವನ್ನಾಗಿ ಕಟ್ಟಲು ಉಂಟಾಗುತ್ತಿರುವ ಅಡೆತಡೆಗಳು ಅಷ್ಟಿಷ್ಟಲ್ಲ. ಇದರ ಪರಿಣಾಮವನ್ನು ಊಹಿಸಿದರೇ ಭಯವಾಗುತ್ತಿದೆ, ಆರ್ಥಿಕ ಹಂಚಿಕೆ ಅವ್ಯವಸ್ಥೆಗಿಟ್ಟುಕೊಂಡಿದೆ.

ದೆಹಲಿಯಲ್ಲಿ ಕುಳಿತುಕೊಂಡು ಯೋಜನೆಗಳನ್ನು ರೂಪಿಸುತ್ತಿದ್ದಾರೆ. ಡಾ|| ವಿನೋಭಾಭಾವೆಯವರು ಈ ಬಗ್ಗೆ ಒಂದು ಸುಂದರ ರೂಪಕ ಕೊಟ್ಟು ಹೇಳಿದ್ದಾರೆ. ದೆಹಲಿಯೊಂದು ದೊಡ್ಡ ಕಪಿಲೆ ಬಾವಿ, ಇಡೀ ಭಾರತವೇ ಒಂದು ದೊಡ್ಡ ತೋಟ. ಈ ಬಾವಿಯಿಂದ ನೀರು ಹೋಗಲು ಸಮಗ್ರದೇಶಗಳವರೆಗೂ ಮಣ್ಣು ಕಾಲುವೆ ಮಾಡಲಾಗಿದೆ. ದೆಹಲಿಯ ಬಾವಿಯಿಂದ ನೀರನ್ನೆತ್ತಿ ಕಾಲುವೆಗಳಲ್ಲಿ ಬಿಡಲಾಗುತ್ತಿದೆ. ಕಾಲುವೆಗಳೋ ದೊಡ್ಡ ದೊಡ್ಡ ಬಿರುಕುಗಳಿಂದ ಕೂಡಿದೆ. ನೀರು ಮೊದಲು ಬಿರುಕುಗಳನ್ನೆಲ್ಲ ತುಂಬಿ ಮುಂದು ಮುಂದು ಹೋಗುತ್ತದೆ. ತೋಟಗಳಿಗೆ ಹೋಗುವಹೊತ್ತಿಗೆ ಬಾವಿಯ ನೀರೆಲ್ಲ ಬರಿದಾಗುತ್ತದೆ. ತೋಟಗಳಿಗೆ ಹೋಗಬೇಕಾದ ನೀರು ಆ ಪ್ರಮಾಣದಲ್ಲಿ ಹೋಗದೆ ಅದರಲ್ಲಿನ ಗಿಡಗಳು ಸಾಯದೆ ಬದುಕದೆ ಹಾಗೇ ಉಳಿಯುತ್ತವೆ.

ಬಸವಣ್ಣ ತನ್ನ ಕಾಲದಲ್ಲಿ ಆರ್ಥಿಕ ಹಂಚಿಕೆಯ ಬಗೆಗೆ ರೂಪಿಸಿದ ರೀತಿನೀತಿಗಳು ಇಂದಿಗೂ ಆದರ್ಶವಾಗಿಯೇ ಉಳಿದಿವೆ. ಅವನ ಕಾಯಕತತ್ತ್ವ ಶ್ರೇಷ್ಠ ಮಟ್ಟದ ಆರ್ಥಿಕ ಹಂಚಿಕೆಯ ತತ್ತ್ವ. ಕಾಯಕವೆಂದರೆ ಕೇವಲ ಜೀವನ ಸಾಗಿಸಲು ಮಾಡುವ ಒಂದು ವೃತ್ತಿಯಷ್ಟೆ ಅಲ್ಲ. ಅದು ಆತ್ಮೋನ್ನತಿಯ ಮಾರ್ಗವೂ ಕೂಡ. ಧರ್ಮವನ್ನು ಯಥಾರ್ಥವುಳ್ಳದ್ದನ್ನಾಗಿ ಮಾಡುವುದೇ ಬಸವಣ್ಣನವರ ಮತ್ತು ಶರಣರ

ಕ್ರಾಂತಿಯ ಪ್ರಧಾನೋದ್ದೇಶವಾಗಿತ್ತು. ಬಸವಣ್ಣನವರ ಜೀವನಾದರ್ಶ, ಅವರ ತತ್ತ್ವಗಳು ಎಲ್ಲ ಕಾಲಕ್ಕೂ ಮನುಕುಲಕ್ಕೆ ಬೇಕಾದವು. ಅವನ್ನು ಅನುಷ್ಠಾನಕ್ಕೆ ತರುವುದು ಇಂದಿನ ಕಾಲದಲ್ಲೂ ಸಾಧ್ಯವಾಗುತ್ತಿಲ್ಲ ಇದೇ ವಿಷಾದದ ಸಂಗತಿ.

ಬಸವಣ್ಣನವರ ಬಗೆಗೆ ಅವರ ಆದರ್ಶಗಳ ಬಗೆಗೆ ಇತ್ತೀಚಗೆ ಬಹುವಿಧವಾಗಿ ಪ್ರಚಾರವಾಗುತ್ತಿದೆ. ಆದರೆ ಲೋಕ ಇಂದು ತೀರಾ ವಕ್ರವಾಗಿದೆ. ಜನಾಂಗಗಳ ಅಭಿರುಚಿ, ಅಭಿಪ್ರಾಯಗಳು ತೀರಾ ವಿಕೃತಗೊಂಡಿವೆ. ಅವಾಸ್ತವ ನಡೆನುಡಿಗಳಿಂದ ನಾವು ಇನ್ನೊಮ್ಮೆ ನಮ್ಮ ತನವನ್ನು ಕಳೆದುಕೊಳ್ಳುವ ಮಾರ್ಗದಲ್ಲಿ, ದೀರ್ಘವಾಗಿ ಯೋಚಿಸಿ ಸನ್ಮಾರ್ಗಪ್ರವೃತ್ತರಾಗಿ ಪೌರುಷಪ್ರಧಾನ ರಾಷ್ಟ್ರವನ್ನಾಗಿ ಮಾಡುವಲ್ಲಿ ಪ್ರತಿ ಭಾರತೀಯನೂ ಹೆಣಗಬೇಕಾದುದಂತೂ ಸತ್ಯ ವಿಷಯ. ಇಲ್ಲದಿದ್ದರೆ ಪ್ರಪಂಚದ ಬಲಿಷ್ಠ ರಾಷ್ಟ್ರಗಳ ಎದುರು ನಾವು ?

---

(“ ಹಿಂದೂ ” 31 ನೇ ಪುಟದಿಂದ)

ಈ ಕಾಲದಲ್ಲಿ ಹಿಂದೂಸ್ಥಾನ ಮತ್ತು ಹಿಂದುಜನರ ಖ್ಯಾತಿ ಸರ್ವತ್ರ ಹಬ್ಬಿದ್ದಿತು. ಹಿಂದುಜನರ ಸಾಂಸ್ಕೃತಿಕ ಸಾಮ್ರಾಜ್ಯ ವಿಶ್ವವ್ಯಾಪಿಯಾಗಿದ್ದಿತು. ಹಿಂದು ಧರ್ಮ ಪ್ರಚಾರಕರು ಮಾನವ ಜನಾಂಗದ ಕಲ್ಯಾಣಕ್ಕಾಗಿ ವಿಶ್ವದಲ್ಲೆಲ್ಲಾ ಸಂಚಾರ ಮಾಡುತ್ತಿದ್ದರು. ಆ ಕಾಲದಲ್ಲಿ ಭಾರತ ಸಂಪದ್ಭರಿತವಾಗಿದ್ದಿತು. ಜ್ಞಾನ, ವಿಜ್ಞಾನ, ಅಧ್ಯಾತ್ಮ ಮತ್ತು ಸಭ್ಯತೆಗಳಲ್ಲಿ ಅದು ಜಗತ್ತಿಗೇ ಗುರುವಾಗಿದ್ದಿತು. ಕಲೆ-ಕೌಶಲ್ಯಗಳಿಗೂ, ಸುಖ-ಸಮೃದ್ಧಿಗಳಿಗೂ ಹಿಂದುಸ್ಥಾನ ಪ್ರಸಿದ್ಧವಾಗಿದ್ದಿತು ಎನ್ನುವ ಸಂಗತಿ ದಾರಾ ಬಾದಶಹಾರ ಶಿಲಾಲೇಖಗಳಿಂದ ಗೊತ್ತಾಗುತ್ತದೆ. ಕ್ರಿಸ್ತಪೂರ್ವ 484ರ ಈ ಶಿಲಾಲೇಖ ಇರಾನಿನ ಪರ್ಸಿಪೋಲಿಸ್ ನಗರದಲ್ಲಿದೆ. ಕ್ರಿಸ್ತಪೂರ್ವ 520-518ರ ಬಹರೀನ್ ಶಿಲಾಲೇಖ ಮತ್ತು ಕ್ರಿಸ್ತಪೂರ್ವ 515ರ ನಕ್ಷೆ ರುಸ್ತುಮ್ ಮತ್ತು ಮಹದನ್ ಶಿಲಾಲೇಖಗಳಿಂದ ಗಾಂಧಾರ [ಅಫ್‌ಘಾನಿಸ್ಥಾನ] ದೇಶದ ಜನತೆಯ ಮೇಲೆ ಹಿಂದೂ ಸಂಸ್ಕೃತಿಯು ಆಗಿದ್ದುದು ತಿಳಿದು ಬರುತ್ತದೆ. ಇದಲ್ಲದೇ ಕ್ರಿಸ್ತಪೂರ್ವ 500ರ ಸಮಯದಲ್ಲಿ ಹಿಂದ್, ಹಿಂದೂ, ಮತ್ತು ಹಿಂದೂಸ್ಥಾನ ಎನ್ನುವ ಪದಗಳಿಗೆ ಗೌರವದ ಸ್ಥಾನ ಇದ್ದಿತು ಎಂದು ಕಂಡುಬರುತ್ತದೆ. ಆದರೆ ಮುಂದೆ ಇಸ್ಲಾಮ್ ಧರ್ಮದ ಪ್ರಚಾರ ಮಾಡುತ್ತಿದ್ದ ಮುಸಲ್ಮಾನರು ತಿಳಿದು ತಿಳಿದು ಈ ಶಬ್ದಗಳಿಗೆ ಉದ್ದೇಶಪೂರ್ವಕವಾಗಿ ದೋಷಾರೋಪಣೆಯನ್ನು ಮಾಡಿ, ಹಿಂದೂ ಎಂದರೆ ಕಳ್ಳ, ಸುಳ್ಳುಗಾರ, ದಗಾಕೋರ, ಕಪ್ಪನೆಯವ ಎಂದು ಪ್ರಚಾರ ಮಾಡಿದರು ಎಂದು ಇತಿಹಾಸ ಹೇಳುತ್ತಿದೆ. ಕೇವಲ ಸ್ವಾರ್ಥದ ದೃಷ್ಟಿಯಿಂದ ಅವರು ಮಾಡಿದ ಈ ಪ್ರಚಾರ ಅವರ ವಿಕೃತ ಬುದ್ಧಿಯನ್ನು ತೋರಿಸುತ್ತದೆಯೇ ಹೊರತು ಇದರಿಂದಾಗಿ ಹಿಂದು ಅಥವಾ ಹಿಂದುಸ್ಥಾನದ ಗೌರವ ಕಡಿಮೆಯಾಗುವುದಿಲ್ಲ.

# ರಾಜ್ಯ ಸರ್ಕಾರ ಪುರಸ್ಕೃತ
# ವಿದ್ವಾನ್. ಶ್ರೀ. ಬಿ. ಗಂಗಪ್ಪನವರು

—ಸಂಪಾದಕರ



( ಶ್ರೀ ಮಠದಲ್ಲಿ ನಿಷ್ಕಾಮ ಸ
ಸಲ್ಲಿಸಿ. ಶ್ರೀ ಮುದುದ್ದಾನ ಶಿವಯೋಗಿ
ಹಾಗೂ ಡಾ. ಶ್ರೀ. ಶ್ರೀ ಶಿವಕುಮ
ಮಹಾ ಸ್ವಾಮಿಗಳವರ ಅ ನು ಗ್ರ ಹ
ಪಾತ್ರರಾದ ವಿದ್ವಾನ್ ಶ್ರೀ. ಬಿ. ಗಂಗ
ನವರನ್ನು ಕರ್ನಾಟಕ ರಾಜ್ಯ ಸರ್ಕಾ
ಸಾರ್ವಜನಿಕ ಶಿಕ್ಷಣ ಇಲಾಖೆಯು ಅ
41 ವರ್ಷಗಳ ಅಖಂಡವಾದ ಸಂಸ್ಕೃ
ಸೇವೆಯನ್ನು ಮನಗಂಡು ದಿನಾಂ
27-6-83 ರಂದ ಸನ್ಮಾನಿಸಿತು. ಅ
ಕಿರು ಪರಿಚಯವನ್ನು ಇಲ್ಲಿ ಮಾಡಿಕೊ
ಲಾಗಿದೆ. )

ಬೆಂಗಳೂರು ಜಿಲ್ಲಾ ನೆಲಮಂಗಲ ತಾ. ದಾಸೇನಹಳ್ಳಿ ಎಂಬ ಗ್ರಾಮದ ದಿ. 24–4–1916 ರಂದು ಶ್ರೀಯುತರು ಜನಿಸಿದರು. ತಂದೆಯ ಹೆಸರು ಬಾಳಪ್ಪ ತಾಯಿ ಬಸಮ್ಮ. ಬಾಲ್ಯದಲ್ಲಿಯೇ ಇವರೂ ಸಹ ತಂದೆಯಂತೆ ಶ್ರೀ ಸಿದ್ಧಗಂ ಕ್ಷೇತ್ರದಲ್ಲಿ ಆಶ್ರಯ ಪಡೆದು ಪ್ರಾಥಮಿಕ ವಿದ್ಯಾಭ್ಯಾಸವನ್ನು ಪ್ರಾರಂಭಿಸಿದರ ತಮ್ಮ ಶ್ರದ್ಧಾಭಕ್ತಿಯುತವಾದ ವ್ಯಾಸಂಗ ಹಾಗೂ ಶ್ರೀ ಮಠದಸೇವೆಗಳಿಂದ ಅಂದ ಮಠಾಧಿಪತಿಗಳಾಗಿದ್ದ ಶ್ರೀಮುದುದ್ದಾನ ಶಿವಯೋಗಿಗಳವರ[1] ಕೃ ಪಾ ಕ ಟಾ ಕ್ಷ ಭಾಜನರಾಗಿ,[2] ಅವರೇ ಸ್ಥಾಪಿಸಿದ ಶ್ರೀ ಸಿದ್ಧಲಿಂಗೇಶ್ವರ ವೇದ ಸಂಸ್ಕೃತ ಮಹ ಪಾಠಶಾಲೆಯಲ್ಲಿಯೇ ಸಂಸ್ಕೃತಾಭ್ಯಾಸವನ್ನು ಮುಂದುವರಿಸಿದರು. 1943 ರ ಅಲಂಕಾರ ಶಾಸ್ತ್ರದಲ್ಲಿ ದ್ವಿತೀಯ ಸ್ಥಾನದೊಂದಿಗೆ ವಿದ್ವತ್ತುಮ ಪದವಿಯನ ಪಡೆದರು.

ತಾವು ಕಲಿತ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ವೇದ ಮಹಾ ಪಾಠಶಾಲೆಯ

---

1. ಶ್ರೀ ಮುದುದ್ದಾನ ಶಿವಯೋಗಿಗಳವರ ಶಿಷ್ಯ ಇವರು.
2. ಸನಿಹದಲ್ಲಿದ್ದುಕೊಂಡು ಸೇವೆ ಗೈದ ಇವರು ಇಂದಿಗೂ ಶ್ರೀ ಮುದುದ್ದಾನ ಶಿ ಯೋಗಿಗಳವರ ಬಗ್ಗೆ ಅನೇಕ ವಿಚಾರಗಳನ್ನು ಹೇಳುತ್ತಾರೆ.

ಲ್ಲಿಯೇ 41 ವರ್ಷಗಳ ಕಾಲ ಅಲಂಕಾರಶಾಸ್ತ್ರದ ಸಹಅಧ್ಯಾಪಕರು,ಉಪ ಪ್ರಾಧ್ಯಾಪಕರು, ಹಾಗೂ ಪ್ರಾಧ್ಯಾಪಕರಾಗಿ (1-7-1935 ರಿಂದ 30-4-1976)ಸೇವೆ ಸಲ್ಲಿಸಿರುತ್ತಾರೆ. ಶ್ರೀ ಕ್ಷೇತ್ರದಲ್ಲಿ 1964 ರಲ್ಲಿ ಪ್ರಾರಂಭಗೊಂಡ ಕನ್ನಡ ಪಂಡಿತ ಕಾಲೇಜಿನಲ್ಲಿಯೂ ಹತ್ತಾರು ವರ್ಷಗಳ ಕಾಲ ಪಾಠಪ್ರವಚನಗೈದಿರುತ್ತಾರೆ. ಹೀಗೆ ಶಿಷ್ಯಚಿತ್ತಾಪಹಾ-ರಕರಾದ ಶ್ರೀಯುತರು ವಿದ್ವತ್ತರಗತಿ ಹಾಗೂ ಕನ್ನಡ ಪಂಡಿತ ತರಗತಿಗಳ ನೂರಾರು ಮಂದಿ ವಿದ್ಯಾರ್ಥಿಗಳಿಗೆ ತಮ್ಮ ವಿಶಿಷ್ಟಬೋಧನಾಕ್ರಮವಿಡಿದು ವಿದ್ಯಾದಾನ ಮಾಡಿ ಅವರ ಬಾಳನ್ನು ಬೆಳಗಿಸಿದ್ದಾರೆ.

ಉತ್ತಮ ವಿದ್ವಾಂಸರಾದ ಇವರು ಕರ್ನಾಟಕ ಶಿಕ್ಷಣ ಇಲಾಖೆಯ ಸಂಸ್ಕೃತ ಪಠ್ಯಪುಸ್ತಕ ಸಮಿತಿಯ ಸದಸ್ಯರಾಗಿ, ಸಂಪಾದಕರಾಗಿ ಸಾಮರ್ಥ್ಯದಿಂದ ಕಾರ್ಯ ನಿರ್ವಹಿಸಿದ್ದಾರೆ. ಸಂಸ್ಕೃತ ಪ್ರಥಮಾ ಹಾಗೂ ಸಾಹಿತ್ಯ ತರಗತಿಯ ಪಠ್ಯ ಪುಸ್ತಕಗಳು ಇದಕ್ಕೆ ಉತ್ತಮ ನಿದರ್ಶನವಾಗಿ ನಿಲ್ಲಬಲ್ಲವು.

ಸಮರ್ಥ ಬರಹಗಾರರಾದ ಇವರು ಶ್ರೀ ಸಿದ್ಧಗಂಗಾ ಸಂಸ್ಕೃತ ಕಾಲೇಜಿನ ವತಿಯಿಂದ ಪ್ರಕಟವಾಗುತ್ತಿದ್ದ "ಕಿರಣ" ಎಂಬ ಶ್ರೀ ಮಠದಿಂದ ಪ್ರಕಟವಾಗುತ್ತಿರುವ "ಸಿದ್ಧಗಂಗಾ" ಎಂಬ ಮಾಸ ಪತ್ರಿಕೆ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ರಜತ ಮಹೋತ್ಸವದ ನೆನಪಿನ ಸಂಚಿಕೆ, ಕಾಲೇಜಿನ ವಜ್ರ ಮಹೋತ್ಸವದ ನೆನಪಿನ ಸಂಚಿಕೆ, ಮುಂತಾದವುಗಳ ಸಮಿತಿಗಳಲ್ಲಿ ಸದಸ್ಯರಾಗಿ, ಉಪಾಧ್ಯಕ್ಷರಾಗಿದ್ದು ಅವುಗಳಲ್ಲಿ ಸಂಸ್ಕೃತ- ಕನ್ನಡ ಭಾಷೆಗಳಲ್ಲಿ ವಿಚಾರಪೂರ್ಣವಾದ ಲೇಖನಗಳನ್ನು ಬರೆದಿರುತ್ತಾರೆ. ಹಾಗೂ ಘನ ವಿದ್ವಾಂಸರುಗಳ ಸಮ್ಮುಖದಲ್ಲಿ ವ್ಯವಸ್ಥೆಗೊಂಡ ವಿದ್ವದ್ಗೋಷ್ಠಿಗಳಲ್ಲಿ ಭಾಗವಹಿಸಿ ವಿದ್ವತ್ಪೂರ್ಣವಾದ ಭಾಷಣಗಳನ್ನೂ ಮಾಡಿರುತ್ತಾರೆ.

ಶ್ರೇಷ್ಠ ವಿದ್ವಾಂಸರಾದ ಇವರ ಪಾಂಡಿತ್ಯವನ್ನು ಮನಗಂಡ ಚಿತ್ರದುರ್ಗದ ಶ್ರೀ ಮಜ್ಜಗದ್ಗುರು ಬೃಹನ್ಮಠಾಧ್ಯಕ್ಷರಾದ ಶ್ರೀಮುರುಘರಾಜೇಂದ್ರ ಮಹಾ ಸ್ವಾಮಿಗಳವರು ಪಟ್ಟಾಧಿಕಾರ ಮಹೋತ್ಸವ ಸಂದರ್ಭದಲ್ಲಿ ದಿ. 14-10-64 ರಂದು "ಸಾಹಿತ್ಯಭೂಷಣ" ಎಂಬ ಪ್ರಶಸ್ತಿಯನ್ನು ಆಶೀರ್ವಾದ ಪೂರ್ವಕವಾಗಿ ನೀಡಿ ಗೌರವಿಸಿದ್ದಾರೆ.

ಶ್ರೀಯುತರು ಶ್ರೀ ಮಠದಲ್ಲಿ ಸಲ್ಲಿಸಿದ ಸೇವೆ ಗಣನೀಯವಾದದು. ಹಗಲೆನ್ನದೆ, ಇರುಳೆನ್ನದೆ, ತಮ್ಮ ದೇಹವನ್ನು ಗಂಧದ ಕೊರಡಿನಂತೆ ತೇದಿದ್ದಾರೆ.

ವಿಶ್ರಾಂತಿ ಹೊತ್ತುಬಿಟ್ಟು ಉಳಿದೆಲ್ಲ ವೇಳೆ ಶ್ರೀ ಮಠದಲ್ಲಿಯೇ ಅವರ ಓಡಾಟ. ಮಠದ ಎಲ್ಲಾ ಚಟುವಟಿಕೆಗಳಲ್ಲಿ ಭಾಗಿ. ಹೀಗೆ ತಮ್ಮ ಅವಿಶ್ರಾಂತ ಸೇವೆಯಿಂದ ಅವರು, ಪರಮಪೂಜ್ಯ ಡಾ. ಶ್ರೀ ನಿ. ಪ್ರ. ಸ್ವ. ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಅನುಗ್ರಹ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಪರಮಪೂಜ್ಯಶ್ರೀಗಳವರು "ಶ್ರೀಯುತ ಬಿ. ಗಂಗಪ್ಪ ಇವರು ಸಂಸ್ಕೃತ ಮಹಾ ಪಾಠ ಶಾಲೆಯಲ್ಲಿ 41 ವರ್ಷ ಪರ್ಯಂತ ಸಹ ಉಪಧ್ಯಾಯ ವೃತ್ತಿಯಿಂದ ಪ್ರಾರಂಭಿಸಿ ಪ್ರಾಧ್ಯಾಪಕ ಹುದ್ದೆಯವರೆಗೂ ಸೇವೆಯನ್ನು ಸಲ್ಲಿಸಿ ಶಾಸ್ತ್ರಗಳಲ್ಲಿ ಹೆಚ್ಚಿನ ಪ್ರೌಢಿಮೆಯನ್ನು ಪಡೆದು ವಿದ್ಯಾರ್ಥಿಗಳಿಗೆ ಜ್ಞಾನ ಪ್ರಸಾರವನ್ನು ಸಲ್ಲಿಸಿರುತ್ತಾರೆ. ಬೋಧನಾ ವಿಷಯದ ಜೊತೆಗೆ ಬೇರೆ ಬೇರೆ ಸಾರ್ವಜನಿಕ ಸೇವೆ ಸಲ್ಲಿಸುತ್ತಾ ಶ್ರೀ ಸಿದ್ಧಗಂಗಾ ಮಠದ ಸೇವಾ ಕಾರ್ಯದಲ್ಲಿ ಕಾಯೇನ-ವಚಸಾ-ಸ್ತುತ್ಯವಾದ ಸೇವೆಯನ್ನು ಗೈದಿರುತ್ತಾರೆ........" ಮುಂತಾಗಿ ಮೆಚ್ಚಿ ಪ್ರಶಸ್ತಿ ಪತ್ರವನ್ನು ದಯಪಾಲಿಸಿರುತ್ತಾರೆ. ಅದಲ್ಲದೇ ಶ್ರೀ ಶ್ರೀಗಳವರ ರಜತ ಮಹೋತ್ಸವ ಹಾಗೂ ಸುವರ್ಣ ಮಹೋತ್ಸವಗಳಂಥ ಅಪೂರ್ವ ಸಮಾರಂಭಗಳ ಮಹಾಸಭೆಯಲ್ಲಿ ಶ್ರೀಯುತರು ಸನ್ಮಾನಿಸಲ್ಪಟ್ಟಿರುತ್ತಾರೆ.

"ಸಿದ್ಧಗಂಗಾ" ಮಾಸ ಪತ್ರಿಕೆಯ ಪ್ರಾರಂಭಿಕಾವಸ್ಥೆಯಲ್ಲಿ ಶ್ರೀಯುತರು ಸಲ್ಲಿಸಿದ ಸೇವೆ ಸ್ತುತ್ಯವಾದುದಾಗಿದೆ.

ಈಗಲೂ ಅರವತ್ತುವರ್ಷದಾಟಿರುವ ಶ್ರೀಯುತರು ಸಂಸ್ಕೃತವನ್ನು ಅಭ್ಯಾಸ ಮಾಡಲು ಬರುವ ವಿದ್ಯಾರ್ಥಿಗಳಿಗೆ ಸ್ವ-ಸಂತೋಷದಿಂದ ಯಾವ ವಿಧವಾದ ಪ್ರತಿಫಲಾಪೇಕ್ಷೆಯಿಲ್ಲದೆ ಬೋಧನೆಗೈಯುತ್ತಾ ಸಂತೃಪ್ತ ಜೀವನ ನಡೆಸುತ್ತಿದ್ದಾರೆ. "ನಿಷ್ಕಾಮ ಸೇವಾ ನಿಷ್ಠೆಯಲ್ಲಿ ಬದುಕಿನ ಸಾರ್ಥಕ್ಯವಿದೆ" ಎಂಬ ತತ್ತ್ವವನ್ನು ಬದುಕಿನಲ್ಲಿ ಅಳವಡಿಸಿಕೊಂಡು ಸುರ ಭಾರತಿಯ ಸೇವೆಗೈಯುತ್ತಿರುವ ಶ್ರೀಯುತರ ಸೇವಾಪೂರ್ಣ ಬದುಕು ಅನುಕರಣನೀಯ ಆದರ್ಶನೀಯ.

**"ವೇದ ವಿದ್ವಾಂಸರಾಗಿದ್ದ ಶ್ರೀ ಕೆಂಪನಂಜಯ್ಯಶಾಸ್ತ್ರಿಗಳವರಿಗೆ ಸನ್ಮಾನ"**

ವೇದ ವಿದ್ವಾಂಸರಾಗಿ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾ ಪಾಠ ಶಾಲೆಯಲ್ಲಿ ಹಲವು ವರ್ಷಗಳು ಸೇವೆ ಸಲ್ಲಿಸಿದ್ದ ವಿದ್ವಾನ್ ಎನ್. ಕೆಂಪನಂಜಯ್ಯ ಶಾಸ್ತ್ರಿ ಇವರಿಗೂ ಸಾರ್ವಜನಿಕ ಶಿಕ್ಷಣ ಇಲಾಖೆಯವರು ಗೌರವಿಸಿ ಸನ್ಮಾನಿಸಿದುದುನ್ನು ಇಲ್ಲಿ ಸ್ಮರಿಸಬಹುದು. ಶ್ರೀಯುತರು ವೇದ ಪಾಠ ಬೋಧನೆಯ ಜೊತೆಗೆ ಶ್ರೀ ಸಿದ್ಧಗಂಗಾ ಮಠದಲ್ಲಿಯೂ ಬಹಳ ವರ್ಷಗಳ ಕಾಲ ಉತ್ತಮ ಸೇವೆಯನ್ನು ಸಲ್ಲಿಸಿರುತ್ತಾರೆ. ನಮ್ಮ ಸರ್ಕಾರ ಸಂಸ್ಕೃತ ಮತ್ತು ವೇದ ವಿದ್ವಾಂಸರನ್ನು ಗುರುತಿಸಿ ಗೌರವಿಸಿ ಸನ್ಮಾನಿಸುತ್ತಿರುವುದು ಇಂದು ಔಚಿತ್ಯಪೂರ್ಣವಾದುದು. ಗೌರವಿಸಿ ಪುರಸ್ಕರಿಸಿದ ಇಲಾಖೆಗೆ ಪತ್ರಿಕೆಯು ಧನ್ಯವಾದಗಳನ್ನು ಸಮರ್ಪಿಸುತ್ತದೆ.

# ಕನ್ನಡ ಕಡ್ಡಾಯ ಒತ್ತಾಯದ ಪ್ರಶ್ನೆಯೇ ?

—ಮಹದೇವ ಬಣಕಾರ

ಇತ್ತೀಚೆಗೆ ಬೆಳಗಾವಿಯಲ್ಲಿ ರಾಜ್ಯದ ಕಾರ್ಮಿಕ ಸಚಿವ ಮಾನ್ಯ ಶ್ರೀ ಅಜೀಜ್ ಸೇಠ ಅವರು ಅಲ್ಪ ಸಂಖ್ಯಾಂತರ ಮೇಲೆ ಕನ್ನಡವನ್ನು ಕಡ್ಡಾಯನಾಗಿ ಹೇರುವುದರ ಬಗ್ಗೆ ವಿರೋಧ ವ್ಯಕ್ತಪಡಿಸಿದ್ದಾರೆ. ಇದಲ್ಲದೆ ತಮ್ಮ ಹೇಳಿಕೆಯಿಂದ ಕನ್ನಡ ಚಳವಳಿಗಾರರು ತಮ್ಮ ಪ್ರತಿಕೃತಿಯನ್ನು ಸುಡುತ್ತಾರೆಂದೂ ಹೇಳಿದ ಅವರು ಆದರಿಂದ ತಾವು ಮತ್ತಷ್ಟೂ ಪ್ರಸಿದ್ಧಿಗೆ ಬರುವುದಾಗಿ ನುಡಿದರು (ಕನ್ನಡ ಪ್ರಭಾ ೨೭-೮-೧೯೮೩) ಮಾನ್ಯ ಸಚಿವರು ಅಲ್ಪಸಂಖ್ಯಾತರು ಯಾರು ? ಭಾಷಾ ಅಲ್ಪ ಸಂಖ್ಯಾತರು ಯಾರು ? ಎಂಬುದನ್ನೇ ತಿಳಿದುಕೊಂಡಿಲ್ಲ ಮುಸಲ್ಮಾನರು ಅಲ್ಪ ಸಂಖ್ಯಾತರು. ಅಂದರೆ ಇದೇ ರಾಜ್ಯದಲ್ಲಿ ತಲೆತಲಾಂತರದಿಂದ ಹುಟ್ಟಿ ಬೆಳೆದು ಬಂದ ವರು. ಆಯಾ ಪ್ರಾಂತೀಯ ಬಹು ಭಾಷಾ ಸಂಖ್ಯಾತರ ಸಹೋದರರು. ಕನ್ನಡಿ ಗರ ಮೇಲೆ ಕನ್ನಡವನ್ನು ಹೇಗೆ ಕಡ್ಡಾಯವಾಗಿ ವಿಧಿಸುವುದಿಲ್ಲವೋ ಹಾಗೆಯೇ ಮುಸಲ್ಮಾನರ ಮೇಲೂ ಕನ್ನಡವನ್ನು ಕಡ್ಡಾಯವಾಗಿ ಹೇರುವ ಪ್ರಶ್ನೆ ಉದ್ಭವಿಸು ವುದಿಲ್ಲ ಪ್ರಾದೇಶಿಕ ಭಾಷೆಯನ್ನೇ ಅವರು ಮಾತೃಭಾಷೆ ಎಂದು ಗೌರವಿಸಬೇಕು.

ವಾಸ್ತವ ಸ್ಥಿತಿ ಹೀಗಿದ್ದರೂ ರಾಜ್ಯ ಪುನರ್ ವಿಂಗಡಣೆಯ ಪರಿಣಾಮವಾಗಿ ಬೇರೆ ಬೇರೆ ರಾಜ್ಯಗಳಿಂದ ವರ್ಗಾಯಿಸಲ್ಪಟ್ಟ ನೆರೆಯ ರಾಜ್ಯಗಳ ಜನಾಂಗಕ್ಕೆ 'ಭಾಷಾ ಅಲ್ಪಸಂಖ್ಯಾತ' ರೆಂದು ಗುರುತಿಸಿ, ಅವರು ತಾವು ಸಮಾವೇಶಗೊಂಡ ರಾಜ್ಯದ ಪ್ರಾದೇಶಿಕ ಜನಾಂಗ, ಪರಿಸರ ಹಾಗೂ ಭಾಷೆಗೆ ಹೊಂದಿಕೊಳ್ಳುವವರೆಗೆ ಮೊದಲಿನ ರಾಜ್ಯದಲ್ಲಿ ಅವರಿದ್ದಂತೆ ಅವರವರ ಮಾತೃ ಭಾಷೆಯಲ್ಲಿಯೇ ಪ್ರಾಥಮಿಕ ಹಂತದವರೆಗೆ ಶಿಕ್ಷಣ ನೀಡಬೇಕೆಂದು ಸಂವಿಧಾನದಲ್ಲಿ ಅವಕಾಶ ಕಲ್ಪಿಸಲಾಗಿದೆ. ಕೇರಳ, ತಮಿಳುನಾಡು, ಆಂಧ್ರ, ಮಹಾರಾಷ್ಟ್ರಗಳಿಂದ ಕರ್ನಾಟಕಕ್ಕೆ ಕೆಲವು ಭೂಭಾಗವು ವರ್ಗಾಯಿಸಲ್ಪಟ್ಟಿದ್ದರೆ, ಅಥವಾ ಕರ್ನಾಟಕ ರಾಜ್ಯದ ಭೂಭಾಗವು ಮೇಲೆ ಕಾಣಿಸಿದ ನೆರೆಯ ರಾಜ್ಯಗಳಿಗೆ ವರ್ಗಾಯಿಸಲ್ಪಟ್ಟಿದ್ದರೆ, ಅಂಥ ನೆಲದಲ್ಲಿ ಅಂದರೆ ಗಡಿಗಳಲ್ಲಿ ವಾಸವಾಗಿರುವವರು ಭಾಷಾ ಅಲ್ಪಸಂಖ್ಯಾತರು. ಆದರೆ ಮುಸ ಲ್ಮಾನರು ಯಾವ ರಾಜ್ಯದಿಂದ ನಮ್ಮ ರಾಜ್ಯಕ್ಕೆ ರಾಜ್ಯ ಪುನರ್ವಿಂಗಡಣಾ ಪರಿಣಾಮವಾಗಿ ವರ್ಗಾಯಿಸಲ್ಪಟ್ಟವರು ? ಮುಸಲ್ಮಾನರು ಅಲ್ಪ ಸಂಖ್ಯಾತರೇ ವಿನಃ ಭಾಷಾ ಅಲ್ಪ ಸಂಖ್ಯಾತರಲ್ಲ. ಅವರು ಅಚ್ಚ ಕನ್ನಡಿಗರು, ಕನ್ನಡಿಗರಷ್ಟೇ ಅವ

ರಿಗೂ ಸರ್ವವಿಧವಾದ ಹಕ್ಕುಗಳಿವೆ.

ಈ ದೃಷ್ಟಿಯಿಂದ ಕನ್ನಡವನ್ನು ಮುಸಲ್ಮಾನರ ಮೇಲೆ ಒತ್ತಾಯವಾಗಿ ಹೇರುವ ಪ್ರಶ್ನೆಯೇ ಇಲ್ಲ. ಕನ್ನಡವನ್ನು ಕಲಿಯುವುದು, ಕನ್ನಡವನ್ನು ಗೌರವಿಸುವುದು ಅವರ ಆಜನ್ಮ ಹಕ್ಕು. ಮಾನ್ಯ ಸಚಿವ ಅಜೀಜ್ ಸೇಠರು ಇದನ್ನು ಚೆನ್ನಾಗಿ ಮನವರಿಕೆ ಮಾಡಿಕೊಳ್ಳಬೇಕಲ್ಲದೆ ತಾಸುಣ್ಣುವ ತಟ್ಟೆಯಲ್ಲೇ ಹೊಲಸು ತುಂಬಬಾರದು. ಹಾಗೂ ಜನರನ್ನು ಭಾವೋದ್ರೇಕಗೊಳಿಸುವ ಜಾತಿ ಆಧಾರಿತ ಹೇಳಿಕೆಗಳನ್ನು ನೀಡಿ, ಸಾಮಾಜಿಕ ನೆಮ್ಮದಿಗೆ ಭಂಗವನ್ನುಂಟು ಮಾಡಬಾರದು, ನನ್ನ ಹೇಳಿಕೆಯಿಂದ ಕನ್ನಡ ಚಳುವಳಿಗಾರರು ನನ್ನ ಪ್ರತಿಕೃತಿಯನ್ನು ಸುಡುತ್ತಾರೆ ಅದರಿಂದ ನಾನು ಮತ್ತಷ್ಟು ಪ್ರಸಿದ್ಧಿಗೆ ಬರುತ್ತೇನೆ ಎಂದು ಹೇಳಿದ್ದಾರೆ. ಪ್ರಸಿದ್ಧಿಯಾಗಬೇಕೆಂದಿದ್ದರೆ ಶ್ರೀ ಅಜೀಜ್ ಸೇಠರು 'ಒಂದು ದಿನ ಬತ್ತಲೆಯಾಗಿಯೇ ವಿಧಾನ ಸೌಧವನ್ನು ಪ್ರವೇಶಿಸಲಿ' ಪತ್ರಿಕೆಗಳೆ ಅವರ ಭಾವಚಿತ್ರ ಸಹಿತ ಸಾಕಷ್ಟು ಪ್ರಚಾರವನ್ನು ನೀಡುತ್ತವೆ.

'ನಾನು ಎಂದೂ ಕುರ್ಚಿಯ ಬೆನ್ನು ಹತ್ತಿಲ್ಲ, ಕುರ್ಚಿಯೇ ನನ್ನ ಬೆನ್ನು ಹತ್ತಿದೆ' ಎಂದಿದ್ದಾರೆ, ಆಬಗ್ಗೆ ನಾನು ಏನನ್ನೂ ಹೇಳಬಯಸುವುದಿಲ್ಲ. ಅವರ ರಾಜಕೀಯ ಜೀವನದ ಚರಿತ್ರೆಯೇ ಅದಕ್ಕೆ ಸಾಕ್ಷಿ. ಇನ್ನುಮೇಲಾದರೂ ಕನ್ನಡವನ್ನು ವಿರೋಧಿಸುವ ಹಾಗೂ ಕನ್ನಡಿಗರನ್ನು ಕೆರಳಿಸುವ, ಹಾಗೂ ಜಾತೀಯತೆಯ ವಿಷಬೀಜವನ್ನು ಬಿತ್ತುವ ಹೇಳಿಕೆಗಳನ್ನು ನೀಡದಿರಲಿ, ತಮಗೂ ತಾವು ಸದ್ಯಕ್ಕೆ ಇರುವ ಪಕ್ಷಕ್ಕೂ ಕೆಟ್ಟ ಹೆಸರು ಬರದಂತೆ ನಡೆದುಕೊಳ್ಳಲಿ ಎಂದು ವಿನಯ ಪೂರ್ವಕವಾಗಿ ಪ್ರಾರ್ಥಿಸಿಕೊಳ್ಳುತ್ತೇನೆ.

ಇನ್ನು, ಭಾಷಾ ಅಲ್ಪಸಂಖ್ಯಾತರು ಯಾರು ? ಅವರಿಗೆ ಸಂವಿಧಾನಾತ್ಮಕವಾಗಿ ಯಾವ ಯಾವ ಸೌಲಭ್ಯಗಳನ್ನು ಒದಗಿಸಬೇಕು. ಕರ್ನಾಟಕವನ್ನೊಳಗೊಂಡಂತೆ ಭಾರತದಲ್ಲಿ ಯಾವ ಯಾವ ರಾಜ್ಯಗಳು ಎಷ್ಟೆಷ್ಟು ಸವಲತ್ತು ಹಾಗೂ ಸಹಾನುಭೂತಿಯನ್ನೂ ವ್ಯಕ್ತಗೊಳಿಸಿವೆ ! ಭಾಷಾ ಅಲ್ಪ ಸಂಖ್ಯಾತರ ಹಿತರಕ್ಷಣೆ ಯಾವ ಯಾವ ರಾಜ್ಯಗಳಲ್ಲಿ ಎಷ್ಟರ ಮಟ್ಟಿಗೆ ಆಗಿದೆ ! ಈ ದೆಸೆಯಲ್ಲಿ ಕರ್ನಾಟಕದ ಮೇಲ್ಮೆ ಏನು ? ಇತ್ಯಾದಿ ವಿಷಯಗಳನ್ನು "ಭಾರತದಲ್ಲಿ ಭಾಷಾ ಅಲ್ಪ ಸಂಖ್ಯಾತರ ಹಿತರಕ್ಷಣೆ" ಎಂಬ ಈ ಪುಸ್ತಕದಲ್ಲಿ ಸಂಕ್ಷಿಪ್ತ ವಿವರಣೆಯನ್ನು ಇತ್ತಿದ್ದೇನೆ.

ಇದಲ್ಲದೆ ಗೋಕಾಕ್ ವರದಿಯ ತಿರುಳೇನು ? ತತ್ ಸಂಬಂಧವಾದ ಸರಕಾರದ ಆಜ್ಞೆ ಮತ್ತು ಕನ್ನಡವನ್ನು ಆಡಳಿತ ಭಾಷೆಯಾಗಿ ಎಲ್ಲ ಹಂತಗಳಲ್ಲಿ ಹೇಗೆ ಜಾರಿ

42 ನೇ ಪುಟ ನೋಡಿ

ಇದಲ್ಲದೆ ಹಸಿವವನಿಗೆ ಅನ್ನ ನೀಡುವುದು ಅತ್ಯಂತ ಮಾನವೀಯ ಕಾರ್ಯ ; ಅದು ಧರ್ಮ :

ಹಸನಾಗಿ ಬದುಕುವಡೆ ಕುಶಲನೆಂದೆನಿಸುವಡೆ
ಪಶುಪತಿಯು ಪದವ ಪಡೆಯುವಡೆ ಹಸಿದವನಿಗೆ
ಅಶನವನು ಇಕ್ಕು,

ಎಂದೂ, 'ಅನ್ನವನು ಇಕ್ಕುವ ಅನ್ಯಜಾತನೆ ಕುಲಜ' ಎಂದೂ ಸರ್ವಜ್ಞನು ಸಾರಿ ದನು. ಅನ್ನವನು ಇಕ್ಕುವುದು ನನ್ನಿಯನು ನುಡಿಯುವುದು ಸೌಹಾರ್ದದ ನೆಲೆ ಗಟ್ಟನ್ನು ಪಡೆದು, ನಿಂತಲ್ಲೇ ಸ್ವರ್ಗ ಸೃಷ್ಟಿಸಲು ಸಾಧಕವೆಂಬುದನ್ನು ನಮ್ಮ ಕವಿಗಳು, ಪ್ರವಾದಿಗಳು ಎಷ್ಟು ತಿಳಿಯಾಗಿ ಹೇಳಿದರು ? ನಾವು ಕೇಳಬೇಕಲ್ಲ ?

ಹಂಚಿ ಉಣ್ಣುವುದು ಎಂದರೆ ಬರೀ ತಿಂಡಿ-ತೀರ್ಥವೆಂದು ಮಾತ್ರ ಅರ್ಥವಲ್ಲ. ತಾನು ಅನುಭವಿಸಿದ ಸುಖಸಂತೋಷ, ಸಿರಿಸಂಪದ ಇವು ಸ್ವಲ್ಪ ಭಾಗವಾದರೂ ಉಳಿದವರಿಗೆ ಸಲ್ಲಲೆಂಬ ಸದ್ಭಾವನೆ ದೊಡ್ಡದು. 'ಕಲಿತ ಬಿಜ್ಜೆಯು ಬಲ್ಲರಿಗೆ ಕೇಳಿಪುದ ರಿಂದೈಸೆ ಫಲ' ಎನ್ನುತ್ತಾಳೆ ಸಂಚಿಯ ಹೊನ್ನಮ್ಮ. ಕಾವ್ಯ ಓದಿ, ಶಾಸ್ತ್ರಾಭ್ಯಾಸ ಮಾಡಿದವ ತನ್ನ ಎದೆಯಲ್ಲಿ ಹಚ್ಚಿಕೊಂಡ ಜ್ಞಾನಾನುಭವದ ಜ್ಯೋತಿಯಿಂದ ತನ್ನ ಮನಸ ಬೆಳಗಿಸಿಕೊಂಡಂತೆ, ತನ್ನ ಕೆಲವು ಸಹಜೀವಿಗಳ ಎದೆಯ ಪ್ರಣತಿಯನ್ನಾ ದರೂ ಹಚ್ಚಿಟ್ಟರೆ ತನ್ನ ಕಲಿಕೆ ಸಾರ್ಥಕ. ಹಾಗೆಯೇ ಧನಿಕರು, ಉಳ್ಳವರು, ದರಿದ್ರ ರಿಗೆ, ಇಲ್ಲದವರಿಗೆ ಉದಾರವಾಗಿ ನೀಡಿ, ತನ್ನಂತೆ ಪರರ ಬಗೆವುದು ದೈವೀಗುಣ. ಸಮಾಜದಲ್ಲಿ ಇಂಥ ಗುಣ ಬೆಳೆದಂತೆಲ್ಲಾ ಸುಖಶಾಂತಿ ನೆಮ್ಮದಿಗಳು ನೆಲೆಪಡೆಯು ತ್ತವೆ. ಕೊಲೆ, ಸುಲಿಗೆ, ವಂಚನೆಗಳು ದೂರಾಗುತ್ತವೆ.

ಹೀಗೆ ಅನಧಿಕೃತ, ಆದರೆ ವ್ಯವಸ್ಥಿತ ಹಂಚಿಕೆ, ಕೊಡು-ಕೊಳಿಕೆ ಸಮಾಜದಲ್ಲಿ ನಡದೇ ಇರುತ್ತದೆ. ಇಲ್ಲಿ ಒಂದು ಸೂಕ್ಷ್ಮ ವಿಚಾರವಿದೆ. ಉಳ್ಳವನು ತಾನು ನೀಡು ವಾಗ ತಾನು ದೊಡ್ಡವನೆಂಬ, ದಾನಶೂರನೆಂಬ ಭಾವ ಅವನಲ್ಲಿ ಮೂಡಬಾರದು ; ಸ್ವೀಕರಿಸುವವನಿಗೆ ತಾನು ಕೀಳೆಂಬ ನೀಚಭಾವವೂ ಸುಳಿಯಬಾರದು ; ಕೃತಜ್ಞತಾ ಭಾವವಿದ್ದರೆ ಸಾಕು. 'ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು' ಎಂಬ ತತ್ತ್ವ ಸಾರ್ಥಕವಾಗುವುದು ಇಂಥ ಆರೋಗ್ಯಕರವಾದ ಸಂವೇದನೆಯಿಂದ.

ಕೆರೆಕಟ್ಟೆಗಳನ್ನು ಕಟ್ಟಿಸಿದಾಗ ಅವಕ್ಕೆ ಕೋಡಿ, ತೂಬುಗಳನ್ನಿಟ್ಟಿರುತ್ತಾರೆ. ಹೆಚ್ಚು ನೀರು ಹರಿದರೆ ಅದು ಕೆರೆಯ ಏರಿಯನ್ನು ಹಾಳುಮಾಡದೆ ಕೋಡಿಯ ಮೂಲಕ ಹೋಗುತ್ತದೆ. ಮತ್ತು ಸಂಗ್ರಹಗೊಂಡ ನೀರನ್ನು ತೂಬಿನ ಮೂಲಕ ಬಳಸಿಕೊಳ್ಳುತ್ತದೆ. ಅದರಂತೆ ಸಂಗ್ರಹಗೊಂಡ ಹಣ, ಜ್ಞಾನ, ಅನುಭವ ಅಗತ್ಯ ವಿರುವವರ ಕಡೆಗೆ ಉಕ್ಕಿ ಹರಿಯಬೇಕು. ಇಲ್ಲವೇ ವ್ಯವಸ್ಥಿತ ಏರ್ಪಾಡಿನಿಂದ ಹೊರ

ಸೂಸಿ ಉಳಿದವರ ತಣಿಸಬೇಕು. ಹಣವುಳ್ಳವರಲ್ಲಿ ದಾನಧರ್ಮಪರೋಪಕಾರಗುಣಗಳು ಇದ್ದುವೆಂದರೆ ಬಂಗಾರಕ್ಕೆ ಸುವಾಸನೆಯೂ ಸೇರಿದಂತೆಯೆ. ಆದರಿಂದಲೇ ಸೋಮೇಶ್ವರಶತಕದಲ್ಲಿ 'ಧನವುಳ್ಳಂ ತ್ಯಾಗಿಯಾಗಲ್....ದೊರೆವೋಲ್ ಚಿನ್ನಕೆ ಸೌರಭಂ' ಎಂಬ ಮಾತು ಬಂದಿದೆ. ಆದ್ದರಿಂದ ಒಳ್ಳೆಣಿಸು, ಒಳ್ಳೆಮಾತು, ಸದ್ವಿಚಾರಗಳನ್ನೂ ನಾವು ನಾಲ್ಕು ಜನಕ್ಕೆ ಹಂಚಿ ಉಣ್ಣ ಕಲಿಯಬೇಕು. ಆಗ ಎಲ್ಲೆಲ್ಲೂ ಸುಜ್ಞಾನ ಪ್ರಕಾಶ, ಶಾಂತಿ ಸಮಾಧಾನ. ಹಂಚುವುದೆಂದರೆ ನಮ್ಮದನ್ನು ಕಳೆದುಕೊಳ್ಳುವುದಲ್ಲ, ಹಂಚುವುದರ ಮೂಲಕ ಅದನ್ನು ಹೆಚ್ಚಿಸಿಕೊಳ್ಳುವ ಸೌಭಾಗ್ಯ ಯಾರಿಗೆ ಬೇಡ? (ಆಕಾಶವಾಣಿಕೃಪೆ)

---

ಕನ್ನಡ ಕಡ್ಡಾಯ ಒತ್ತಾಯದ ಪ್ರಶ್ನೆಯೇ? (40 ನೇ ಪುಟದಿಂದ)

ಗೊಳಿಸಬೇಕು? ಇಂಗ್ಲೀಷಿನವರಿಂದ ಕನ್ನಡವು ಹೇಗೆ ಆಡಳಿತ ಭಾಷೆಯಾಗಿ ಬಳಕೆಯಾಗಿತ್ತು?

ಇತ್ಯಾದಿ ಮಹತ್ವದ ವಿಷಯಗಳನ್ನು ಕನ್ನಡಿಗರ ಎದುರಿಗಿಟ್ಟಿದ್ದೇನೆ. ೧೯೮೩ ನೇ ನವೆಂಬರ್ ೯ ರಂದು ಭಾರತದ ಪ್ರಧಾನಿ, ರಾಷ್ಟ್ರಪತಿ ಮತ್ತು ಉಪರಾಷ್ಟ್ರಪತಿಗಳಿಗೆ ಈ ಬಗ್ಗೆ ಇಂಗ್ಲೀಷ್ ಮನವಿಯನ್ನು ಅವಗಾಹನೆಗೆ ಕಳಿಸಿದ್ದೇನೆ. ರಾಜ್ಯ ರಾಷ್ಟ್ರ ಸರ್ವಾಂಗೀಣ ಔನ್ನತ್ಯಕ್ಕಾಗಿ ಜನತೆಯ ಪ್ರತಿನಿಧಿಗಳಾಗಿ ಚುನಾಯಿತರಾದ ಶಾಸಕರು ಈವಿಷಯವನ್ನು ಪಕ್ಷರಹಿತ ಪ್ರಶ್ನೆಯನ್ನಾಗಿ ಪರಿಗಣಿಸಿ ತಮ್ಮ ಸಲಹೆ ಸೂಚನೆಗಳನ್ನು ನೀಡಬೇಕಾಗಿ ಪ್ರಾರ್ಥನೆ.

---

## ಆರು ಅಹಿತರು ನಿನಗೆ?

—ಸಿದ್ದಯ್ಯ ಪುರಾಣಿಕ್.

ಯಾರು ಅಹಿತರು ನಿನಗೆ ಈ ಮೂವರೊಳಗೆ?
ನೀನಿತ್ತ ಕಸ ನುಂಗಿ ರಸವನೀಯುವ ಮಣ್ಣೊ?
ಜೆಂಕಿಯೊಳು ಸುಟ್ಟು ಅಲಂಕಾರವಾಗುವ ಹೊನ್ನೊ?
ಬಾಳ ಹಣತೆಯೊಳೆಣ್ಣೆಯಾಗಿ ಉರಿಯುವ ಹೆಣ್ಣೊ?
ಯಾರು ಅಹಿತರು ನಿನಗೆ ಈ ಮೂವರೊಳಗೆ?

ಪ್ರಾಣ ದೇವನ ಸಾಕಿ ಸಲಹುತಿಹ ತನುವೋ?
ಮೂಲೋಕದೊಡೆಯನನೆ ಮಡಗಿಕೊಳ್ಳುವ ಮನವೋ?
ತನ್ನ ನಿತ್ತನ್ಯರಿಗೆ ಹಿತವೀವ ಧನವೋ?
ಯಾರು ಅಹಿತರು ನಿನಗೆ ಈ ಮೂವರೊಳಗೆ?

ಅಯ್ದು ಕವನಗಳ

ಸಿದ್ಧಗಂಗಾ

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ

(ತಾ॥ 18–4–83 ರಂದು ಕಿರು ಕೊಡಲಿಮಠ, ಕೊಡ್ಲಿಪೇಟೆ, ಉತ್ತರ ಕೊಡಗು ಜಿಲ್ಲೆಯಲ್ಲಿ ನಡೆದ ಗ್ರಾಮಾಂತರ ಬಸವ ಜಯಂತಿ ಮತ್ತು ನೂತನ ಚರ ಪಟ್ಟಾಧಿಕಾರ ಸಮಾರಂಭಗಳಲ್ಲಿ ಮಾಡಿದ ಆಶೀರ್ವಚನ ಸಿದ್ಧಗಂಗಾ ಶ್ರೀ ಶ್ರೀಗಳವರಿಂದ.)

ಕಿರು ಕೊಡಲಿಮಠ ಪ್ರಾಚೀನವಾದುದು. 1976 ರಲ್ಲಿ ಶ್ರೀಮಠದ ಹಿಂದಿದ್ದ ಶ್ರೀ ಗುರುಸಿದ್ಧ ಸ್ವಾಮಿಗಳು ಲಿಂಗೈಕ್ಯರಾದರು. ಅವರ ಉತ್ತರಾಧಿಕಾರಿಗಳಾಗಿ ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳು ಅಧಿಕಾರ ವಹಿಸಿಕೊಂಡಿದ್ದಾರೆ. ಈ ಮಠದ ಅಭಿವೃದ್ಧಿ, ನೂತನ ಶ್ರೀ ಶ್ರೀಗಳು ಮತ್ತು ಈ ಪ್ರಾಂತ್ಯದ ಭಕ್ತರ ಮೇಲಿದೆ ಶ್ರೀಮಠದ ಭಕ್ತರ ಸಹಕಾರ ತುಂಬಾ ಅಗತ್ಯವಾದುದು. ವೀರಶೈವ ಧರ್ಮಗುರುಗಳು ಅನಾದಿಕಾಲದಿಂದಲೂ ನಾಡಿನುದ್ದಕ್ಕೂ ಅನೇಕ ಮಠ ಮಾನ್ಯಗಳನ್ನು ಮಾಡಿ ಸಮ ಕಾಲಿನ ಜನತೆಯನ್ನು ಸರ್ವಾಂಗೀಣ ಉನ್ನತಿಗೆ ಮಾರ್ಗದರ್ಶಕವಾಗಿದ್ದಾರೆ. ಜನತೆ ಯಲ್ಲಿ ಧಾರ್ಮಿಕ ಭಾವನೆಯು ನೆಲೆಗೊಳ್ಳಲು ತಮ್ಮ ಪ್ರಭಾವವನ್ನು ಬೀರಿದ್ದಾರೆ. ಅದರ ಕುರುಹಾಗಿ ಈ ಮಠಗಳೂ ಇಂದಿಗೂ ಆವಿಧ ಸೇವೆಯನ್ನು ಮಾಡುತ್ತಾ ಬಂದಿರುವುದು ಸಾಕ್ಷಿಯಾಗಿವೆ. ಈ ಭಾಗದ ಜನತೆಯು ಆ ವಿಧವಾದ ಧಾರ್ಮಿಕ ಸಂಪತ್ತನ್ನು ಅನುದಿನವೂ ಪಡೆಯಲೆಂದು ಹಾರೈಸುತ್ತೇವೆ.

ವೀರಶೈವ ಧರ್ಮ ವಿಶ್ವಧರ್ಮದ, ಇಷ್ಟಲಿಂಗೋಪಾಸನೆ, ಅಷ್ಟಾವರಣ, ಷಟ್ಸ್ಥಲ, ಪಂಚಾಚಾರಗಳು ಈ ಧರ್ಮವನ್ನು ಆ ಮೇಲ್ಮಟ್ಟಕ್ಕೆ ಹೊಯ್ದಿವೆ. ಇವು ಗಳು ಜಗತ್ತಿನ ತಾರಕ ಮಂತ್ರವಾಗಿವೆ. ಅಂತೆಯೇ ಜಗತ್ತಿನ ತಾರಕವಾದ ಧರ್ಮ ವೀರಶೈವ ಧರ್ಮ. ಆ ತಾರಕವಾದ ಅನುಕೂಲ ಸರ್ವರಿಗೂ ದೊರಕಬೇಕು. ಇತರರೂ ಪರಿಚಯ ಮಾಡಿಕೊಂಡು ತಮ್ಮ ಬಾಳನ್ನು ಹಸನ ಮಾಡಿಕೊಳ್ಳಬೇಕೆಂದು ತವಕಪಟ್ಟು ಜಗತ್ತಿನ ಉದ್ಧಾರಕ್ಕೆ ತನ್ನನ್ನೇ ಮೀಸಲಾಗಿಟ್ಟುಕೊಂಡ ಪುಣ್ಯಾತ್ಮ ಶ್ರೀ ಬಸವಣ್ಣನವರು. ಬಸವಣ್ಣನವರು ಸಮಗ್ರ ಕ್ರಾಂತಿಯ ಮೂಲಪುರುಷ. ಕರ್ನಾಟಕ ದಲ್ಲಿ ಜನ್ಮವೆತ್ತಿ ಜಗತ್ತಿಗೆ ಬೇಕಾದರು. ಜಗತ್ತಿನಲ್ಲಿ ಕರ್ನಾಟಕದ ಕೀರ್ತಿಯನ್ನು ಬೆಳಗಿದರು.

ಅನೇಕ ಮಂದಿ ಪವಾಡವನ್ನು ಮಾಡಿದ ಪವಾಡಪುರುಷರು ನಮ್ಮಲ್ಲಿ ಹಿಂದಿನಿಂದಲೂ ಕಾಣಸಿಗುತ್ತಾರೆ. ಕೇವಲ ಪವಾಡಗಳಿಂದ ಯಾರೂ ದೊಡ್ಡವರೆನಿಸಿಕೊಳ್ಳುವುದಿಲ್ಲ. ಬಸವಣ್ಣನವರೂ ಕೆಲವು ಪವಾಡಗಳನ್ನು ಮಾಡಿದರು. ಆದರೆ ಅವರು ಅದಕ್ಕೆ ಅಂಟಿಕೊಳ್ಳಲಿಲ್ಲ, ಮತ್ತು ಅದಕ್ಕೇ ಮನ ಸೋಲಲಿಲ್ಲ. ಬಸವಣ್ಣನವರು ಒಬ್ಬ ಪರುಷವ್ಯಕ್ತಿ, ಅವರ ನಡೆ ಪರುಷ, ನುಡಿ ಪರುಷ, ಮನ ಪರುಷ, ಭಾವ ಪರುಷ, ಹಸ್ತ ಪರುಷಗಳಾದ ಪಂಚ ಪರುಷಗಳ ಶ್ರೇಷ್ಠ ವ್ಯಕ್ತಿ ಬಸವಣ್ಣನವರು. ಇಲ್ಲಿ ರಾಮಕೃಷ್ಣ ಪರಮಹಂಸರ ಒಂದು ಕಥೆ ನೆನಪಿಗೆ ಬರುತ್ತದೆ. ಒಮ್ಮೆ ಪರಮಹಂಸರ ಹತ್ತಿರ ಒಬ್ಬ ವ್ಯಕ್ತಿ ಬಂದ. ಆತ ನಾನು ನಾಲ್ಕಾರು ವರುಷಗಳು ದೇಶಾಂತರ ಹೋಗಿ ಒಂದು ಸಿದ್ಧಿಯನ್ನು ಗಳಿಸಿಕೊಂಡು ಬಂದಿದ್ದೇನೆ. ಆ ಸಿದ್ಧಿಯೆಂದರೆ ಹರಿಯುವ ನದಿಯನ್ನು ನಡೆದುಕೊಂಡು ದಾಟುವುದು ಎಂದ. ಆಗ ಪರಮಹಂಸರು ಒಬ್ಬ ನಾವಿಕನನ್ನು ಕರೆದು ಈತನನ್ನು ಈ ದಡದಿಂದ ಆ ಕಡೆ ದಡಕ್ಕೆ ಕರೆದುಕೊಂಡು ಹೋಗು ಎಂದು ಹೇಳಿ ಎಂಟು ಆಣೆಯನ್ನು ಕೊಟ್ಟರು. ಆತ ಸುಲಭವಾಗಿ ಕರೆದುಕೊಂಡು ಹೋಗಿ ಆ ದಡ ಸೇರಿಸಿದ. ಅನಂತರ ಬಂದ ವ್ಯಕ್ತಿಯನ್ನು ಕುರಿತು ಪರಮಹಂಸರು ನಿನ್ನ ಸಿದ್ಧಿಯ ಕಿಮ್ಮತ್ತು ಕೇವಲ ಎಂಟು ಆಣೆ. ಈ ಎಂಟು ಆಣೆಯ ಕಿಮ್ಮತ್ತಿಗೆ ಇಷ್ಟು ವರ್ಷಗಳು ವ್ಯಯಮಾಡಿದೆ. ಶ್ರಮವೆಷ್ಟು, ಇದರಿಂದ ಲಾಭ ಕಡಿಮೆ. ಮನುಷ್ಯ ಸಾಧಿಸಬೇಕಾದ್ದು ಕೇವಲ ಎಂಟಾಣೆ ಕಿಮ್ಮತ್ತಿನಷ್ಟಲ್ಲ, ಬೆಲೆ ಕಟ್ಟಲಾಗದಷ್ಟು ಶ್ರೇಷ್ಠ ಮಾನವತ್ವವನ್ನು ಸಂಪಾದಿಸಬೇಕಾಗುತ್ತದೆ ಎಂದು ಆತನಿಗೆ ಪರಮಹಂಸರು ಹೇಳಿದರಂತೆ.

ಆದ್ದರಿಂದ ಪವಾಡದಿಂದ ಸಾಧಿಸಬಹುದಾದದ್ದೂ ಅಷ್ಟೇ ಪ್ರಮಾಣದ್ದು. ಬಸವಣ್ಣನವರು ಪವಾಡ ಮಾಡಿದ್ದು ಜನತೆಯಲ್ಲಿ ಆಸ್ತಿಕ್ಯ ಭಾವನೆಯನ್ನು ಮೂಡಿಸಲು ಜೀವನದಲ್ಲಿ ಧಾರ್ಮಿಕ ಭಾವನೆಯನ್ನು ಅಳವಡಿಸಿಕೊಳ್ಳಲು ಅಷ್ಟೇ ಹೊರತು. ಪವಾಡವೇ ಅಂತಿಮವಲ್ಲ. ಆ ಕಾರಣ ಬಸವಣ್ಣನವರ ತತ್ತ್ವದರ್ಶನದ ಉದ್ದೇಶ ಜಯಂತಿಯ ಆಚರಣೆ ಭೀಕರ ಬಡತನದ ನಿವಾರಣೆ ಈ ತತ್ತ್ವಾನುಷ್ಠಾನದಿಂದ ಸಾಧ್ಯವಾಗುತ್ತದೆ, ವ್ಯಕ್ತಿಯ ಬಾಳು ಸಮೃದ್ಧವಾಗುತ್ತದೆ.

ಬಸವಣ್ಣನವರನ್ನು ಕುರಿತು ಮಹಾತ್ಮ ಗಾಂಧಿಯವರು 1924 ರ ಬೆಳಗಾಂ ಕಾಂಗ್ರೆಸ್ ಅಧಿವೇಶನದಲ್ಲಿ ಈ ರೀತಿ ಹೇಳಿದರು. '"ನಾನು ಕರ್ನಾಟಕದ ಜನತೆಗೆ ಹೊಸ ಸಂದೇಶವನ್ನು ನೀಡುವುದೇನಿಲ್ಲ, ಮಹಾತ್ಮ ಬಸವಣ್ಣನವರು ನೀಡಿರುವ ಸಂದೇಶಗಳನ್ನು ಅನುಸರಿಸಿದರೆ ಭರತಖಂಡ ಉದ್ಧಾರವಾಗುತ್ತದೆ. ದೇವರು ಕೊಟ್ಟಿರುವ ಶಕ್ತಿಯನ್ನು ಬಳಕೆ ಮಾಡಿಕೊಳ್ಳುವುದೇ ಜೀವಿತದ ಉದ್ದೇಶ" ಎಂಬುದಾಗಿ.

ಪ್ರತಿಯೊಬ್ಬ ವ್ಯಕ್ತಿಯೂ ಇಂದು ತಾನು ಮಾಡುವ ಕಾರ್ಯದಲ್ಲಿ ಶ್ರದ್ಧೆ, ನಿಷ್ಠೆಗಳನ್ನು ಬೆಳೆಸಿಕೊಳ್ಳಬೇಕು ಅಂತಹ ಜನಾಂಗದ ಸೃಷ್ಟಿಯಾಗಬೇಕು. ಆಲಸ್ಯ

ಮನೋಭಾವ ತೊಡೆದುಹೋಗದ ಹೊರತು ಬದುಕು ಹಸನಾಗುವುದಿಲ್ಲ. ದೇಶದಲ್ಲಿ ಅನ್ನದ ಕೂಗು ನಿಲ್ಲದವರೆವಿಗೂ ಸ್ವಾತಂತ್ರ್ಯಕ್ಕೆ ಅರ್ಥ ಬರದು. ಮೊದಲು ಅನ್ನ ಆನಂತರ ಬೌದ್ಧಿಕತೆ. ತದನಂತರದಲ್ಲಿ ತತ್ತ್ವಜ್ಞಾನ, ಹಸಿದ ಹೊಟ್ಟೆಗೆ ತತ್ತ್ವಜ್ಞಾನ ತುಂಬುವುದಿಲ್ಲ. ಈ ಕ್ರಮದಲ್ಲಿ ಸಾಗಿದಾಗ ವ್ಯಕ್ತಿಯ ಜೀವನ ಪರಿಪೂರ್ಣತೆಯ ಕಡೆಗೆ ಸಾಗುತ್ತದೆ, ದೇವದೇವನ ಸಾಕ್ಷಾತ್ಕಾರ ಲಭಿಸುತ್ತದೆ. ಆ ವಿಧವಾದ ಮಂಗಳ ಮುಹೂರ್ತವನ್ನು ಭಗವಂತನು ಅನುಗ್ರಹಿಸಲೆಂದು ಹಾರೈಸುತ್ತೇವೆ.

ಸಮಾರಂಭದಲ್ಲಿ ಸುಶ್ರಾವ್ಯವಾಗಿ ಪ್ರವಚನ ಮಾಡಿದ ಶ್ರೀ ಚನ್ನಪ್ಪ ಎರೇಸೀಮೆ ಯವರು "ನಮ್ಮ ದೃಷ್ಟಿಯಂತೆ ಸೃಷ್ಟಿಯಿರುತ್ತದೆ" ಅಂದರೆ ನಮ್ಮ ಭಾವನೆ ವರ್ತನೆ ಗಳೆಲ್ಲವು ಪರಿಶುದ್ಧವಾಗಿರಬೇಕು ತಾನು ಒಳ್ಳೆಯವನಾದರೆ ಜಗತ್ತು ಒಳ್ಳೆಯದಾಗು ತ್ತದೆ ಎಂಬ ಅಂಶವನ್ನು ಧರ್ಮರಾಯ ದುರ್ಯೋಧನರ ಮಹಾಭಾರತ ಪ್ರಸಂಗವನ್ನು ತೆಗೆದುಕೊಂಡು ಸ್ವಾರಸ್ಯಕರವಾಗಿ ತಿಳಿಯಪಡಿಸಿದರು. "ಒಮ್ಮೆ ಒಂದು ತಿಂಗಳ ಅವಧಿಯನ್ನು ಕೊಟ್ಟು ಶ್ರೀಕೃಷ್ಣನು ಧರ್ಮರಾಯನನ್ನು ನಿನಗೆ ಕೆಟ್ಟವರು ಎಷ್ಟು ಜನರು ಸಿಕ್ಕುತ್ತಾರೆಂದು ಪಟ್ಟಿಮಾಡಿಕೊಂಡು ಬರುವಂತೆ ಹೇಳಿದನಂತೆ. ಧರ್ಮ ರಾಯ ತಿಂಗಳನಂತರ ಬಂದು ನನಗೆ ಯಾರೂ ಕೆಟ್ಟವರೇ ದೊರಕಲಿಲ್ಲ ಎಂದನಂತೆ. ಅದೇ ಅವಧಿ ಕೊಟ್ಟು ದುರ್ಯೋಧನನಿಗೆ ಒಳ್ಳೆಯವರೆಷ್ಟು ಮಂದಿ ಸಿಗುವರು ಪಟ್ಟಿ ಮಾಡಿಕೊಂಡು ಬಾ ಎಂದು ಹೇಳಿದಾಗ ನನಗೆ ಒಬ್ಬರೂ ಉತ್ತಮರು ನನ್ನ ಕಣ್ಣಿಗೆ ಬೀಳಲಿಲ್ಲ ಎಂದನಂತೆ". ಆದ್ದರಿಂದ ನಮ್ಮ ನಮ್ಮ ಮನೋಧರ್ಮ ಮುಖ್ಯ. ನಾವು ಇತರರನ್ನು ದೂಷಿಸುವುದು ತಪ್ಪಬೇಕು. ಈ ಅಭಿಪ್ರಾಯವನ್ನು ಪುಷ್ಟೀಕರಿಸುವ 'ಲೋಕದ ಡೊಂಕ ನೀವೇಕೆ ತಿದ್ದುವಿರಿ ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ ಎಂಬ ಅಣ್ಣನವರ ವಾಣಿಯನ್ನು ಸಭೆಯ ಮುಂದಿಟ್ಟರು. ಸಮಾರಂಭಕ್ಕೆ ಅನೇಕ ಮಠಗಳ ಹರಗುರು ಚರಮೂರ್ತಿಗಳೂ ಆಗ ಮಿಸಿದ್ದರು. ರಾತ್ರಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ನಾಟಕ ಮಂಡಲಿಯವರಿಂದ ಶ್ರೀ ಜಗಜ್ಜ್ಯೋತಿ ಬಸವೇಶ್ವರ ನಾಟಕವು ಅಭಿನಯಿಸಲ್ಪಟ್ಟಿತು.

---

## ಸಲಹು ಸಿದ್ಧಲಿಂಗೇಶ

—ಗೂಳೂರ ಸಿದ್ದವೀರಣ್ಣೊಡೆಯರ

ಶ್ರೀ ವಿಮಲಮುಕ್ತಿದಾಯಕ
ಪಾವನಮಯ ಪರಮಚರಿತ ಷಟ್‌ಸ್ಥಲನಾಯಕ
ಭೂವಿನುತ ಸಚ್ಚಿದಾತ್ಮಕ
ಭಾವಜಹರ ಸಲಹು ಸಿದ್ಧಲಿಂಗ ಸುದೇಶಿಕ.

## ಸಣ್ಣ ಕಥೆಗಳು

—ಶ್ರೀ ಹೆಚ್. ಎಲ್. ರಾಮಸ್ವಾಮಿ, ಎಂ.ಎ., ನಿವೃತ್ತ ಪ್ರಿನ್ಸಿಪಾಲರು
(ಸಿದ್ಧಗಂಗಾ ಸಂಸ್ಕೃತ ಕಾಲೇಜು)

### ಧೈರ್ಯಸ್ಥನಾದ ಗುಜ್ಜಾರಿ.

ಜಡ್ಡುದೇಹದ ಗುಜ್ಜಾರಿಯೊಬ್ಬನು ಸೇನಾಧಿಪತಿಯು ನಿಯಮಿಸಿದ್ದ ಸಮಿತಿಯ ಮುಂದೆ ಸ್ವಯಂ ಹಾಜರಾಗಿ ತನ್ನನ್ನು ಸೈನ್ಯಕ್ಕೆ ಸೇರಿಸಿ ಕೊಳ್ಳಬೇಕೆಂದು ಬೇಡಿಕೊಂಡನು. ಆದರೆ ಸಮಿತಿಯು ಈತನ ಕುರೂಪನ್ನೂ ಕುಗ್ಗಿದ ಶರೀರವನ್ನೂ ನೋಡಿ ತಿರಸ್ಕರಿಸಿದರು. ಆದರೂ ಧೈರ್ಯಗೆಡದೆ ಗುಜ್ಜಾರಿಯು ಸೇನಾಧಿಪತಿಯ ಬಳಿಗೇ ಹೋಗಿ ದಾಖಲ್ಮಾಡಿಕೊಳ್ಳುವಂತೆ ಪ್ರಾರ್ಥಿಸಿದನು. ಅಲ್ಲೂ ಇವನಿಗೆ ಪುರಸ್ಕಾರ ದೊರೆಯಲ್ಲಿಲ್ಲ. ಮೊದಲನೇ ಯುದ್ಧಗಳಲ್ಲೊಂದು ಮುಗಿದ ಮೇಲೆ, ಅವನು ಸೈನ್ಯಾಧಿಪತಿಯ ಸಮೀಪಕ್ಕೆ ಓಡಿ ಬಂದು ಬಹು ಸಂತೋಷ ಮತ್ತು ಉತ್ಸಾಹದಿಂದ—"ನೋಡಿದಿರಾ! ತಾವು ನನ್ನನ್ನು ಸೈನ್ಯಕ್ಕೆ ಸೇರಿಸಿಕೊಳ್ಳಲಿಲ್ಲ ಆದರೂ ನಾನು ಸೈನ್ಯಕ್ಕೆ ಸೇರಿ ಕಾದಾದಿದುದನ್ನು ಯಾರೂ ತಪ್ಪಿಸಲಾಗಲಿಲ್ಲ. ನಾನು ನಿಜವಾಗಿಯೂ ಧೈರ್ಯದಿಂದ ಕಾದಾಡಿದೆ. ನನಗೆ ಏಟೂ ಸಹ ಬಿದ್ದಿದೆ ಎಂದು ಮುಂತಾಗಿ ಹೇಳಿದನು. ಸೈನ್ಯಾಧಿಪತಿಗೆ ಇವನ್ಯಾರು ಎಂಬುದು ನೆನಪಾಯ್ತು. ಆಗ ಅವರು "ಶಹಬಾಸ್" ಎನ್ನುತ್ತಾ "ನಿನಗೆ ಗಾಯವೆಲ್ಲಿಹಾಗಿದೆ" ಎಂದರು. ಆಗ ಅರಿಯದ ಗುಜ್ಜಾರಿಯು ದಿಗ್ಭ್ರಾಂತನಾಗಿ ಕ್ಷಣಕಾಲ ನಿಂತಿದ್ದು, ನಂತರ, ತನಗಿದ್ದ ಭುಜದ ಒಂದು ಗಾಯವನ್ನು ತೋರಿಸಿದಾಗ—ಸೈನ್ಯಾಧಿಪತಿಯು "ಛೀ! ಅದು ಶತ್ರುಗಳಿಗೆ ಹೆದರಿ ಹಿಮ್ಮೆಟ್ಟಿ ಓಡುತ್ತಿದ್ದಾಗ ಬಿದ್ದ ಪೆಟ್ಟಾಗಿರಬಹುದು. ನನಗೆ ಗೊತ್ತು ನೀನೆಂದಿಗೂ ನಿಜವಾದ ಸೈನಿಕನಾಗಲಾರೆ" ಎಂದು ಹಿಯಾಳಿಸಿದನು ಈ ಮಾತುಗಳಿಂದ ಲಜ್ಜಿತನಾಗಿ ವ್ಯಾಕುಲಪಟ್ಟು ಬಡಪ್ರಾಣಿ ಸುಮ್ಮನೆ ಹೊರಟುಹೋದನು. ಬೇರೊಂದು ಸಮರವು ಸನ್ನಿಹಿತವಾಗಿತ್ತು, ಅದು ಇನ್ನೂ ಮುಗಿಯುವ ಮುನ್ನವೇ ಈ ಗುಜ್ಜಾರಿಯು ಸೈನ್ಯಾಧಿಪತಿಯ ಮುಂದೆ ಹಾಜರಾದನು. ಆತ ಅವರೊಂದಿಗೆ ಹೀಗೆಂದನು—"ಈ ಬಾರಿ ಮತ್ತೆ ಏಟು ತಿಂದಿದ್ದೇನೆ.. ಆದರೆ ಹಿಂಬಾಗದಲ್ಲಿಲ್ಲ" ತನ್ನ ಎದೆಯ ಮೇಲೆ ಬಲವಾಗಿ ಬಿದ್ದಿದ್ದ ಪೆಟ್ಟನ್ನು ತೋರಿಸುತ್ತಾ ಆ ಧೈರ್ಯಶಾಲಿ ಗುಜ್ಜಾರಿಯು ಸೈನ್ಯಾಧಿಪತಿಯ ಮೇಲೆ ಬಿದ್ದು ಪ್ರಾಣ ಬಿಟ್ಟನು.

LICENSED TO POST WITHOUT PRE PAYMENT LICENCE NO. 3
SIDDAGANGA MONTHLY Reg. No. KRN Q-9



ಈ ಶುಭ ಸಂದರ್ಭದಲ್ಲಿ
ಎಲ್ಲ ಗ್ರಾಹಕರಿಗೂ ಮತ್ತು
ಪ್ರೋತ್ಸಾಹಿಗಳಿಗೆ ಹೃತ್ಪೂರ್ವಕವಾದ
ಧನ್ಯವಾದಗಳು.

ನೀವು ರಾಜಧಾನಿಗೆ ಭೇಟಿ ನೀಡಿದಾಗ :

# ಕೆಂಚಾಂಬ ಲಾಡ್ಜ್

ನಂ. **197**, ಸುಬೇದಾರ್ ಛತ್ರಂ ರಸ್ತೆ
(ಕಪಾಲಿ ಸಿನೆಮಾ ಪಕ್ಕದಲ್ಲಿ)
ಗಾಂಧಿನಗರ : : ಬೆಂಗಳೂರು-9

ಫೋನ್ : 27082 ಗ್ರಾಂ : KENCHMLODG

* ಸೌಜನ್ಯಪೂರ್ಣ ಸೇವೆ.
* ಶುಚಿರುಚಿಯಾದ ಸಸ್ಯಾಹಾರ.
* ಬಸ್ ಮತ್ತು ರೈಲು ನಿಲ್ದಾಣಗಳಿಗೆ ಅತಿ ಸಮೀಪ.
* ನಗರ ಕೇಂದ್ರ ವಾಣಿಜ್ಯ ಹಾಗೂ ಮನರಂಜನೀಯ ಸ್ಥಳದಲ್ಲಿದೆ.
* ವಿಶಾಲವಾದ ಕೊಠಡಿಗಳು (ಬಾತ್‌ರೂಂ ಸಹಿತ).
* ಶಾಂತ ವಾತಾವರಣ ಉತ್ತಮ ಗಾಳಿ ಬೆಳಕು.
* ಕಾರ್ ಪಾರ್ಕಿಂಗ್ ಕಡಿಮೆ ದರಗಳು ಇತ್ಯಾದಿ.



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ.